

ವಾಮನರಾವ ಮಾಸ್ತರ ಇವರ ನಾಟಕಗಳು



# ವೀರ ಅಭಿಮನ್ಯು





ದರ್ಶ ಪ್ರಕಾಶನ ಸಮಿತಿ, ಧಾರವಾಡ

# ವೀರ ಅಭಿಮನ್ಯು



( ಶ್ರೀ. ಶುಕ್ಲಕೃತ ಸಂಗೀತ ನಾಟಕ )

ಅನುವಾದಕರು

**ಶ್ರೀ. ಸವಣೂರ ವಾಮನರಾವ ಮಾಸ್ತರರು**

ಸಂಸ್ಥಾಪಕರು

( ವಿಶ್ವಗಣಾದರ್ಶ ನಾಟಕ ಮಂಡಳಿ ಮತ್ತು ಹುಬ್ಬಳ್ಳಿ ಸಿಟಿಬ್ಯಾಂಕ ಲಿಮಿಟೆಡ್ )

ಹುಬ್ಬಳ್ಳಿ



ಬೆಲೆ ೧—೮—೦

# ಮುನ್ನುಡಿ

‘ ವೀರ ಅಭಿಮನ್ಯು ’ ವು ಕನ್ನಡ ರಂಗಭೂಮಿಯ ಮೇಲೆ ಬಹಳ ಹೆಸರು ಪಡೆದ ನಾಟಕ. ೧೯೩೯ ರಲ್ಲಿ ರಂಗಭೂಮಿಯಲ್ಲಿ ಕಾಲಿಟ್ಟು, ಮುಂದೆ ೧೯೩೪ರ ವರೆಗೆ ಎಷ್ಟೋ ನೂರು ಪ್ರಯೋಗಗಳಾಗಿ, ಕರ್ನಾಟಕದಲ್ಲಿ ವಿಶೇಷ ವಾಗಿ ಉತ್ತರ ಕರ್ನಾಟಕದಲ್ಲಿ, ಹೆಚ್ಚಾಗಿ ಮೆಚ್ಚುಗೆ ಪಡೆಯಿತು. ಆಗಲೇ ಪುಸ್ತಕರೂಪವಾಗಿ ರಸಿಕರ ಕೈ ಸೇರಬೇಕಾಗಿತ್ತು, ಆದರೆ, ಅದಕ್ಕೆ ಸಮಯ ಈಗ ಬಂದಿತು.

ಈ ನಾಟಕವು ಮೂಲದಲ್ಲಿ ಮರಾಠಿಯಲ್ಲಿದೆ. ತಿ. ರಾ. ವಾಮನರಾವ ಮಾಸ್ತರರು ಕನ್ನಡಕ್ಕೆ ಪರಿವರ್ತಿಸಿ, ಅವರೇ ತಮ್ಮ ‘ ವಿಶ್ವಗುಣಾದರ್ಶ ನಾಟಕಮಂಡಳಿಯವರಿಂದ ಒಳ್ಳೆ ಯಶಸ್ವಿಯಾಗಿ ಪ್ರಯೋಗಿಸಿದರು.

ರಂಗಭೂಮಿಯಲ್ಲಿ ಕಳೆಕಟ್ಟುವ ನಾಟಕಗಳ ಬಗ್ಗೆ, ನಮ್ಮಲ್ಲಿಯ ಕೆಲವರು ಕ್ಷುದ್ರ ವಿಚಾರಗಳನ್ನು ಕಲ್ಪಿಸಿಕೊಂಡಿದ್ದಾರೆ. ಇದಕ್ಕೆ ಕಾರಣ ಈ ರೀತಿಯ ನಾಟಕಗಳು ಯಾವ ವಿಶಿಷ್ಟವಾದ ತಂತ್ರಗಳನ್ನು ಅನುಸರಿಸಿ ರುವವೆಂಬುದು ಗೊತ್ತಾಗದಿರುವದು ! ಕೊಂಚ ದೃಷ್ಟಿಕೋನವನ್ನು ಬದ ಲಾಯಿಸಿ, ಈ ರೀತಿಯ ನಾಟಕಗಳನ್ನು ಓದಿದರೆ, ಇಲ್ಲಿಯೂ ಎಷ್ಟೋ ಒಳ್ಳೆಯ ಗುಣಗಳು ಕಂಡುಬರುವ ಆಶೆಯಿದೆ.

ವಿಶ್ವಗುಣಾದರ್ಶ ನಾಟಕ ಸಂಸ್ಥೆಯವರು ಪ್ರಯೋಗಿಸಿದಾಗ ; ನೋಡಿ ಆನಂದಪಟ್ಟು ಪ್ರೋತ್ಸಾಹಿಸಿದ ರಸಿಕರು, ಈ ರೀತಿಯ ಪ್ರಕಾಶನ ಕಾರ್ಯಕ್ಕೂ ಬೆಂಬಲ ಕೊಡುವರೆಂದು ಪೂರ್ಣ ನಂಬಿದ್ದೇನೆ ಬೆಂಬಲ ಸಿಕ್ಕರೆ, ತಂದೆ ಯವರಿಂದ ಅನುವಾದಿತವಾದ ಎಲ್ಲ ನಾಟಕಗಳನ್ನೂ ಒಂದೊಂದಾಗಿ ಅಚ್ಚು ಮಾಡಿಸಬೇಕೆಂದು ನನ್ನ ಮನೀಷೆಯಿದೆ.

ಈ ಪುಸ್ತಕ ಪ್ರಕಾಶನ ಕಾರ್ಯದಲ್ಲಿ ನನಗೆ ಸಹಾಯಮಾಡಿದವರಿಗೆಲ್ಲ ನನ್ನ ಅಭಿವಂದನೆಗಳು.

ಕನ್ನಡದಲ್ಲಿ ಈ ನಾಟಕದ ಚಿತ್ರಪಟ ಮತ್ತು ರಂಗಭೂಮಿಯ ಮೇಲೆ ತರುವ ಮುಂತಾದ ಎಲ್ಲ ಬಗೆಯ ಅಧಿಕಾರಗಳು ನಮಗೇ ಸೇರಿವೆ, ಅಭಿ ನಯಿಸಲಿಚ್ಛಿಸುವವರು ನಮ್ಮ ಅಪ್ಪಣೆಯನ್ನು ಮೊದಲೇ ಪಡೆಯಬೇಕು.

**ವೆ. ವಾ. ಸವಣೂರ**

|| ಶ್ರೀ ಗುರುರಾಜೋ ವಿಜಯತೆ ||

# ವೀರ ಅಭಿಮನ್ಯು



## ಮೊದಲನೇ ಅಂಕ

ನಾಂದಿ

ರಾಗ—ಹಿಂಡೋಲ, ತಾಳ—ಢಮಾರ

ವಾರಿಸಿಧಿಶಯನಾ | ನೀರಜಾಸನ ವಂದಿತಾ | ಪವಮಾನವಿನುತ ||ಪಲ್ಲ||

ಮಥಿಸಿ ಕಡಲನು ಅತಿ ವಿಲಾಸದಿ | ದಿತಿಜರಿಗೆವರಸುಧೆಯನುಣಿಸಿದೆ || ೧ ||

ಬಲಿಯ ಯಜ್ಞದಿ ಬೇಡಿ ದಾನವ | ಛಲದಿ ಬೆಳೆಸಿದೆ ಭಕ್ತನುಹಿಮೆಯ|| ೨ ||

ಪರಮ ಹರುಷದಿ ನಾಟ್ಯ ಕುಸುಮವ | ಚರಣಕರ್ಪಿಸಿ ಧನ್ಯನಾಗುವೆ || ೩ ||

## ಒಂದನೆಯ ಪ್ರಸಂಗ

[ ಕೌರವನ ಬಿಡಾರ:— ದುಶ್ಯಾಸನ, ಶಕುನಿ, ಜಯದ್ರಥ ಮೊದಲಾದವರು ಕುಳಿತಿರುತ್ತಾರೆ. ನರ್ತನ ಗಾಯನ ನಡೆದಿದೆ. ]

**ದುರ್ಯೋಧನ**:—( ಪ್ರವೇಶಿಸಿ) ಸಾಕುಮಾಡಿ, ಈ ನೃತ್ಯಗಾಯನ ವನ್ನು ನಾಕುಮಾಡಿ ರಣಾಂಗಣದಲ್ಲಿ ಮೇಲಿಂದ ಮೇಲೆ ನಮ್ಮ ಪಕ್ಷಕ್ಕೆ ಅಪ ಜಯ ! ನಿಮ್ಮ ಸಂತೋಷಕೂಟಕ್ಕಿದು ಸಮಯವೊ ?

( ನರ್ತಕಿಯರು ನಮಸ್ಕರಿಸಿ ಹೋಗುವಳು)

**ಶಕುನಿ**:— ದುರ್ಯೋಧನಾ ! ನೀನು ನನಗೆ ಕೇವಲ ಅರಸಿಕನಾಗಿ ತೋರುತ್ತೀ. ಎಲವೋ – ನೀನು ಅದೆಂಥ ಸಾರ್ವಭೌಮ ರಾಜನೊ ! ಈ ಯಃಕಶ್ಚಿತ ಯುದ್ಧದ ವಿಷಯವಾಗಿ ಸುಮ್ಮನೆ ಏತಕ್ಕೆ ಯೋಚಿಸುವೆ ? ರಾಜನು ರುಕ್ಷವಾದ ರಾಜಕಾರಣದಲ್ಲಿ ಮನಸ್ಸು ಹಾಕುವುದಕ್ಕಿಂತಲೂ, ನೃತ್ಯ, ಗಾಯನ ಮೊದಲಾದ ಶೃಂಗಾರ ವಿಲಾಸಗಳಲ್ಲಿ ಕಾಲಕಳೆಯುವುದು ಲೇಸು. ಅತ್ತಕಡೆ ಸೈನ್ಯವಿದೆ; ಸೇನಾಪತಿಗಳಿದ್ದಾರೆ ; ಯುದ್ಧವನ್ನು ಮಾಡುತ್ತಲಿದ್ದಾರೆ. ಆಯಿತು ಮತ್ತೇನಾಗಬೇಕಾಗಿದೆ?

**ದುರ್ಯೋ :**-- ಮಾವಾ, ಮೇಲಿಂದಮೇಲೆ ನನ್ನನ್ನು ಈ ರೀತಿಯಾಗಿ ರೇಗಿಸುವುದರಿಂದ ನಿಮಗೇನು ಸಂತೋಷವೋ ಕಾಣೆ! ಅತ್ತ ಶತ್ರು ಪಕ್ಷಕ್ಕೆ ವಿಜಯಲಕ್ಷ್ಮಿಯು ಮಾಲೆಯನ್ನು ಹಾಕುತ್ತಿದ್ದಾಳೆ! ನಮ್ಮ ಶೌರ್ಯವೂ ಉತ್ಸಾಹವೂ ಕುಗ್ಗಿ ದುರ್ದೆಶೆಯೇ ಉಂಟಾಗುತ್ತಿದೆ. ಅಂಥವರಲ್ಲಿ ಇಂಥ ಮಾತೂ ............

**ದುಃಶ್ಯಾಸನ** · — ಅಣ್ಣಾ, ವಿಶ್ರಾಂತಿಕಾಲಸಲ್ಲಿ ಕೇವಲ ಮನೋರಂಜನೆಗಾಗಿ, ನಾನೇ ಈ ನೃತ್ಯಗಾಯನವನ್ನು........

**ದುರ್ಯೋ :**— ಸ್ವಾಭಿಮಾನವುಳ್ಳ ವೀರರಿಗೆ ಇಂತಹ ಸಮಯದಲ್ಲಿ ನೃತ್ಯಗಾಯನಗಳ ಸೊಗಸು ಬೇಕಾಗುವುದಿಲ್ಲ. ಸಮರಚಾತುರ್ಯವನ್ನು ತೋರಿಸಿ, ಶತ್ರುಗಳನ್ನು ಬೆದರುಗೊಳಿಸಿ, ರಣಭೂಮಿಯಲ್ಲಿ, ಅವರ ರುಂಡಗಳನ್ನು ಚಂಡಾಡುವುದೇ ನೃತ್ಯವು ; ವೀರ ಗರ್ಜನೆಯೇ ಗಾಯನವು

**ಶಕುನಿ:** — ದುರ್ಯೋಧನಾ, ನಿಶ್ಚಯವಾಗಿಯೂ ಕೌರವರಾದ ನಿಮಗೆ ಬುದ್ಧಿ ಇಲ್ಲ ನೋಡು! ಯುದ್ಧದಲ್ಲಿ ನಮ್ಮ ಕೌರವಪಕ್ಷಕ್ಕೆ ಅಪಜಯವೇಕಾಗುವುದು? ಇದರ ಕಾರಣವೇನೆಂದು ಯಾರಿಗಾದರೂ ಗೊತ್ತಿದೆಯೆ? ಸುಮ್ಮನೆ ವಾದವನ್ನು ಮಾಡಿ ಪ್ರಯೋಜನವೇನು ?

**ಜಯದ್ರಥ** :— ಮಾವಾ, ನಮ್ಮ ಅಪಜಯಕ್ಕೆ ಕಾರಣವೇನಿರಬಹುದೆಂದು ನಿಮಗೆನಿಸಿದೆ? ಈ ವಿಷಯವಾಗಿ ನಿಮ್ಮ ಅಭಿಪ್ರಾಯವೇನಿದೆ?

**ಶಕುನಿ** :— ನನ್ನ ಅಭಿಪ್ರಾಯವನ್ನು ತಿಳಿಸಿದರೆ— ನೀವದನ್ನು ಮನ್ನಿಸುವದೇ ಇಲ್ಲ. ಸುಮ್ಮನೇ ಕಂಠಶೋಷಣವಾಗುವದು.

**ದುರ್ಯೋ** :— ಮಾವಾ, ಇಂದಿನವರಗೆ ನಿಮ್ಮ ವಿಚಾರವನ್ನು ನಾವೆಂದಾದರೂ ತಿರಸ್ಕಾರ ಮಾಡಿರುವೆವೆ? ಹೇಳು, ನಿನ್ನ ವಿಚಾರವನ್ನು ಈ ಮಹಾಯುದ್ಧದಲ್ಲಿ ನಮಗೆ ಜಯದ ಚಿಹ್ನಗಳೇ ತೋರುವದಿಲ್ಲ. ಏನು ಮಾಡಬೇಕು ?

**ಜಯ** :— ಪಾಂಡವ ವೀರರ ಪರಾಕ್ರಮವನ್ನು ನೋಡಿದರೆ, ನಿರಾಶೆಯಿಂದ ಅಂತಃಕರಣವು ಕುಗ್ಗಿ ಮನಸ್ಸಿನಲ್ಲಿ ವಿಪರೀತ ಕಲ್ಪನೆಗಳೇಳುವವು.

**ದುಶ್ಯಾ** :— ಉತ್ಸಾಹವು ತಗ್ಗುವದು; ಧೈರ್ಯವು ಕುಗ್ಗುವದು; ಮನಸ್ಸು ಮುಗ್ಗರಿಸುವುದು.

**ಶಕುನಿ**:— ಎಂತಹ ಹೇಡಿಗಳೋ ನೀವು! ಇಂತಹ ಸಮಯದಲ್ಲಿ ನಮ್ಮ ಉತ್ಸಾಹವು ಉಕ್ಕಬೇಕು; ಧೈರ್ಯವು ಇಮ್ಮಡಿಯಾಗಬೇಕು. ಕತ್ತರಿಸಿದ ಟೊಂಗಿಗಳು ಒಳ್ಳೇ ಕಸುವಿನಿಂದ ಚಿಗಿತು ಬೆಳೆಯುವ ಹಾಗೆ, ತಿಳಿಯಿತೊ?

**ದುಶ್ಯಾ**:—ಆದರೆ, ನಮ್ಮ ಶೌರ್ಯವೃಕ್ಷಕ್ಕೆ ವೈರಿಗಳ ಪರಾಕ್ರಮದ ಸಿಡಿಲು ಬಡಿದು, ಅದು ಬುಡಸಹಿತವಾಗಿ ಉರುಳಿ ಬಿದ್ದು, ನಾಶವಾಗುವ ಸಮಯವೊದಗಿದಮೇಲೆ, ಇಂಥ ಮಾತುಗಳಿಂದಾಗುವ ಪುರುಷಾರ್ಥವೇನು?

**ಜಯ**:— ಭೀಷ್ಮಪಿತಾಮಹರು. ಶರಪಂಜರದ ಮೇಲೆ ಮಲಗಿದಾಗಿನಿಂದಲೇ ನಮ್ಮ ಪರಾಕ್ರಮವು-ಜಿಗಿದಾಟವು ನಿಂತಿತು; ಶೌರ್ಯದ ತೇಜವು ಅಡಗಿತು.

**ದುರ್ಯೋ**:— ಆದರೆ ಈಗ ದ್ರೋಣಾಚಾರ್ಯರು ಸೇನಾಪತಿಗಳಾಗಿರುವುದರಿಂದ ಉದಾಸೀನವಾದ ಮನಸ್ಸಿಗೆ ಧೈರ್ಯ ಬಂದಂತಾಗಿದೆ.

**ಶಕುನಿ**:— ದುರ್ಯೋಧನಾ ನೀನು ಎಂತಹ ಬೆಪ್ಪನೋ! ಚಾಣಾಕ್ಷ ಮತ್ಸದ್ದಿತನದ ಧೂರ್ತ ವಿಚಾರಗಳು ನಿನ್ನ ತಲೆಯಲ್ಲಿ ಬರುವದೇ ಇಲ್ಲವಲ್ಲ. ಅಂತೇ ದ್ರೋಣಾಚಾರ್ಯರು ಸೇನಾಪತಿಗಳಾಗಿದ್ದಾರೆ ಅವರ ಪ್ರತಿಷ್ಠೆಯನ್ನು ನನ್ನ ಮುಂದೆ ಕೊಚ್ಚಬೇಡ.

**ದುರ್ಯೋ**:— ಅಂದರೆ ಏನು ಮಾವಾ! ಇದರರ್ಥವೇನು?

**ಶಕುನಿ**.— ಆಚಾರ್ಯರು ಉಪ್ಪುಂಡದ್ದನ್ನು ನೆನೆದು ಕ್ರಿಯಾಭ್ರಷ್ಟರಾಗದಿದ್ದರೆ ಕೌರವೇಶ್ವರನಿಗೆ; ಇಂತಹ ಪರಾಭವದ ಪ್ರಸಂಗವೇಕೆ ಬರುತ್ತಿತ್ತು? ಈ ಇಡೀ ನಾಟಕಕ್ಕೆ ಸೂತ್ರಧಾರರು ಆಚಾರ್ಯರೆ! ಅವರೇ ಈ ನಾಟಕವನ್ನು ಪ್ರಾರಂಭಿಸಿದವರು.

**ದುರ್ಯೋ**:— ಮಾವಾ, ನೀನಿದನ್ನೇನು ಹೇಳುವೆ! ಅವರು ವಂಚಕರೇ?

**ಶಕುನಿ**:— ನನ್ನ ಅನುಭವಕ್ಕೆ ಬಂದದ್ದನ್ನು. ನನಗೆ ಒಪ್ಪಿಗೆಯಾದದ್ದನ್ನೇ ನಾನು ಹೇಳಿರುವೆನು. ಆಚಾರ್ಯರು ಮಾತನಾಡುವ ರೀತಿಯೂ, ಅವರ ಉದಾಸೀನತೆಯ ಚಿಹ್ನಗಳೂ ನಿಮಗೆ ಕಾಣಿಸುವದಿಲ್ಲವೇ? ತನುವು ಕೌರವರ ಕಡೆಗೆ; ಮನವು ಪಾಂಡವರ ಕಡೆಗೆ.

**ದುರ್ಯೋ**:— ಏನು! ಆಚಾರ್ಯರು ಕೂಡ— ಹೀಗೆ— ಕಪಟತನದಿಂದ ವರ್ತಿಸುವರೆ?

**ಶಕುನಿ:**— ಸ್ವಲ್ಪ ಧೂರ್ತತನದಿಂದ ವಿಚಾರಿಸಿ ನೋಡು; ಅಂದರ ಇವರ ಕಪಟ ಸ್ವಭಾವವು ನಿಮಗೇ ಚನ್ನಾಗಿ ಗೊತ್ತಾಗುವದು. ಎಲೋ! ಗುರು ದ್ರೋಣಾಚಾರ್ಯರು ಚೆಪ್ಪರಲ್ಲ; ಒಳ್ಳೇ ಪಕ್ಕಾ ಗುರುಗಳು.

**ಜಯ:**— ಬಹಿರಂಗದಲ್ಲಿ ಅವರು—ಕೌರವರ ಸೇನಾನಾಯಕರು; ಅಂತರಂಗದಲ್ಲಿ ಪಾಂಡವರ ಹಿತಚಿಂತಕರು.

**ದುರ್ಯೋ.**— ಛೆ! ಇದನ್ನು ಕೇಳಿ—ನನ್ನ ಬುದ್ಧಿಯು ವಿಭ್ರಮ ವಾಯಿತು ಬ್ರಾಹ್ಮಣರು ನೀಚರು, ಕಪಟಿಗಳು. ನಾನು ಈಗಲೇ ಹೋಗಿ ಆಚಾರ್ಯರನ್ನು ಈ ವಿಷಯವಾಗಿ ಸರಿಯಾದ ಉತ್ತರವನ್ನು ಕೇಳುವೆನು

**ಶಕುನಿ:**— ಹಾ! ಹೀಗೆ ದುಡುಕಬೇಡ. ಆಚಾರ್ಯರು ಬರಲಿ.

**ದುರ್ಯೋ:**— ಬರಲಿ— ಏತಕ್ಕೆ ಬರಬೇಕು! ಇತ್ತಕಡೆಗೆ ಹೆಜ್ಜೆ ಹೆಜ್ಜೆಗೆ ಕೌರವರ ಶೌರ್ಯದ ಅಧಃಪಾತವು; ಅತ್ತಕಡೆಗೆ ಆಚಾರ್ಯರ ಹೃದಯದಲ್ಲಿ ಪಾಂಡವರ ಪಕ್ಷಪಾತವೇ!

**ದ್ರೋಣಾಚಾರ್ಯ:**— (ಪ್ರವೇಶಿಸಿ) ಪಕ್ಷಪಾತವೇ! ಈ ದ್ರೋಣಾಚಾರ್ಯನ ಹೃದಯದಲ್ಲಿ ಪಾಂಡವರ ಪಕ್ಷಪಾತವೇ? ದುರ್ಯೋಧನಾ ನಿನ್ನ ಮೂರ್ಖತನವು ಮಿತಿಮೀರಿ ಕ್ರಮತಪ್ಪಿತು.

ರಾಗ—ದುರ್ಗಾ, ತಾಳ–ತ್ರಿವಟ

ಸ್ವಾರ್ಥಿಯೇ। ಬಿಡು ನೀ। ಕಪಟಪಾ ಸಾರ್ವಭೌಮ॥ ಪ॥
ಅರಿಯೆ ಪಕ್ಷಪಾತ ಭಾವವಾ॥ ದುರುಳ ಮತಿಯೇ ರಾಜಾ।
ವಿವೇಕ ವಿಚಾರ ವಿರೋಧಿ ಮದಾಂಧ ನೀನೆ॥ ೧॥

ದುರ್ಯೋಧನಾ, ಕೇಳು—ನಾನು ಕೌರವರ ಪಕ್ಷಪಾತಿಯೂ ಅಲ್ಲ; ಪಾಂಡವರ ಪಕ್ಷಪಾತಿಯೂ ಅಲ್ಲ. ಈ ದ್ರೋಣನು ಧರ್ಮ, ನ್ಯಾಯ, ಸತ್ಯ ಇವುಗಳ ಪಕ್ಷಪಾತಿಯಾಗಿರುವನು ತಿಳಿಯಿತೇ!

**ದುರ್ಯೋ:**— ಈ ಧರ್ಮದ ವೇದಾಂತವನ್ನು ಬಡಬಡಿಸುವ ಆಚಾರ್ಯರ ಮನಸ್ಸಿನಲ್ಲಿ ಕೃತಜ್ಞತಾ ಬುದ್ಧಿಯು ಸಂಪೂರ್ಣವಾಗಿ ನಷ್ಟವಾದಂತೆ ತೋರುವದು.

**ದ್ರೋಣ:**— ಈ ದ್ರೋಣನು ಕೇವಲ ಕೃತಜ್ಞತೆಯನ್ನೇ ನೆನೆದು ನಿಮ್ಮಂತಹ ನೀಚರ ಸೇವೆಯನ್ನು ಮಾಡುತ್ತಿರುವನು. ದುರ್ಯೋಧನಾ,

ನಿನ್ನ ಅನ್ನದಿಂದ ಈ ಪಿಂಡವು ಪೋಷಿತವಾದದ್ದರಿಂದಲೇ ನಿನ್ನ ಸೇನಾಪತಿಯಾಗಿ ಪಾಂಡವರ ಕೂಡ ಹೋರಾಡುತ್ತಿರುವೆನು. ಇಲ್ಲವಾದರೆ....

**ದುರ್ಯೋ:**— ಇಲ್ಲವಾದರೆ ಏನು? ಅಪ್ರಾಮಾಣಿಕರಾಗಿ ಉಂಡಮನೆಗೆರಡು ಬಗೆಯುತ್ತಿದ್ದಿರಿ, ಅಷ್ಟೇ ಅಲ್ಲವೇ?

**ದ್ರೋಣ:**— ಯಾರು ಅಪ್ರಾಮಾಣಿಕರು? ನಾನೆ! ಅಲ್ಲ, ನೀವು ಅಪ್ರಮಾಣಿಕರು ಪರೋಪಕಾರಿಗಳಾದ ಪಾಂಡವರ ಕೂಡ ದ್ವೇಷಭಾವದಿಂದ ವರ್ತಿಸುವ ಕೌರವರೇ ಅಪ್ರಮಾಣಿಕರು.

**ಶಕುನಿ:**— (ಸ್ವಗತ) ಚೆನ್ನಾಗಿ ಉರಿ ಹತ್ತಿತು.

**ದ್ರೋಣ**—ಈ ದ್ರೋಣನು ಮನಸ್ಸುಮಾಡಿದ್ದರೆ,ಈ ಕೌರವರ ಅಸ್ಥಿರವಾದ ಅಧರ್ಮ ಸಿಂಹಾಸನವು ಯಾವಾಗಲೋ ಮಣ್ಣುಪಾಲಾಗುತ್ತಿತ್ತು! ಅಧರ್ಮ, ಅತ್ಯಾಚಾರ, ಕಪಟಕಾರಸ್ಥಾನಗಳ ಪಾಪಮಯ ಪರಾಕ್ರಮದ ಅಸ್ತಿವಾರದ ಮೇಲೆ ನಿಂತಿರುವಂತಹ, ಪಾಂಡವರ ಜನ್ಮಸಿದ್ಧ ಅಧಿಕಾರವಿರುವಂತಹ, ಈ ಸಾಮ್ರಾಟಸಿಂಹಾಸನವು ....

**ದುರ್ಯೋ:**— ಏನು, ಏನು, ಪಾಂಡವರ ಜನ್ಮಸಿದ್ಧವಾದ ಅಧಿಕಾರದ ಸಿಂಹಾಸನವೇ! ಆಚಾರ್ಯರೆ, ಅದರ ನಿರ್ಣಯವು ಈ ಮಹಾ ಯುದ್ಧದಿಂದಲೇ ಆಗುವದು. ಆದರೆ ಅಂತಃಕರಣವನ್ನು ದಹಿಸುವಂತಹ ಈ ವಿಷಯವನ್ನು ಶಾಂತಿ ಮಾಡಿಕೊಂಡು, ನೀವು ಮಾತ್ರ ನಿಮ್ಮ ಪಕ್ಷಪಾತಬುದ್ಧಿಯನ್ನು ಪ್ರಕಾಶಪಡಿಸಿದಿರಿ.

**ದ್ರೋಣ:**— ಈ ದ್ರೋಣನು ದೇಹದಿಂದ ನಿಮ್ಮ ಆಧೀನನಾಗಿದ್ದರೂ ಮನಸ್ಸಿನಿಂದ ಸ್ವತಂತ್ರನಾಗಿರುವನು.

**ಜಯ:**— ಇದು ಸಾರ್ವಭೌಮತ್ವದ ಅಪಮಾನವು!

**ಶಕುನಿ:**— ಇದು ಪ್ರತ್ಯಕ್ಷ ರಾಜದ್ರೋಹವು!

**ದುರ್ಯೋ:**— ರಾಜದ್ರೋಹವು ಭಯಂಕರ ಪಾಪವು.

**ದ್ರೋಣ:**— ಆದರೆ, ನಿನ್ನ ಸ್ವಜನ ದ್ರೋಹದಂತೆ, ಬಂಧು ದ್ರೋಹದಂತೆ—ಇದು ಪಾಪವಲ್ಲವಲ್ಲ!

**ದುಶ್ಯಾ:**— (ಸ್ವಗತ) ಆಚಾರ್ಯರು ಮಾತಾಡುತ್ತಾ ಮಾತಾಡುತ್ತಾ ಕಾಳಜವನ್ನೇ ಕತ್ತರಿಸಿದರು.

**ದ್ರೋಣ:**— ದುರ್ಯೋಧನಾ ಈ ನಿನ್ನ ಸಾರ್ವಭೌಮತ್ವದ ಡೌಲನ್ನು

ನಾಕುಮಾಡು. ರಾಜದ್ರೋಹವಂತೆ, ರಾಜದ್ರೋಹ! ಸತ್ಯದ ಪಕ್ಷವನ್ನು ವಹಿಸಿ ಮಾತನಾಡಿದರೆ ರಾಜದ್ರೋಹವೆನಿಸುವುದೇ? ಒಬ್ಬನ ಜನ್ಮಸಿದ್ಧವಾದ ಹಕ್ಕಿರುವುದೆಂದು ಹೇಳುವುದು ರಾಜದ್ರೋಹವೇ? ನಿನ್ನ ಬಲತ್ಕಾರದ ರಾಜ್ಯ ದಾಡಳಿತದಲ್ಲಿ, ಧರ್ಮ ನ್ಯಾಯದ ಪಕ್ಷಪಾತವು ರಾಜದ್ರೋಹವೇ ಆನಿಸುವದು

**ಜಯ** :— ರಾಜದ್ರೋಹವಲ್ಲದಿದ್ದರೆ ಇವಕ್ಕೇನು ರಾಜನಿಷ್ಠೆಯನ್ನು ಬೇಕೆ? ರಾಜನ ವೈರಿಯು ಪ್ರಜರಿಗೂ ವೈರಿಯೆ! ಕೌರವರಿಗೆ ಶತ್ರುಗಳಾದವರು ಆಚಾರ್ಯರಿಗೂ ಶತ್ರುಗಳೇ ಆಗಬೇಕು ಆದರೆ ಈ ಆಚಾರ್ಯರೋ, ನಮ್ಮ ದ್ವೇಷಿಗಳಿಗೆ ಕೇವಲ ಹಿತಚಿಂತಕರು!

**ದ್ರೋಣ** :— ದ್ವೇಷಿಗಳಾರು? ಪಾಂಡವರೆ! ಪಾಂಡವರು ಕೌರವರ ದ್ವೇಷಿಗಳಿರಬಹುದು—ಈ ದ್ರೋಣಾಚಾರ್ಯರಿಗೆ ಖಂಡಿತವಾಗಿಯೂ ಅಲ್ಲ.

**ದುರ್ಯೋ** :— ಏಕೆ?

**ದ್ರೋಣ**:— ಏಕೆಂದರೆ, ಈ ದ್ರೋಣಾಚಾರ್ಯರು ಕೌರವ-ಪಾಂಡವ ರಿಬ್ಬರಿಗೂ ಗುರುಗಳಾಗಿದ್ದಾರೆ; ಆದುದರಿಂದ ಉಭಯತರಿಗೂ ಸಮಾನ ಹಿತ ಚಿಂತಕರು.

**ದುಶ್ಯಾ** :— ಇದೇ-ಇದೇ ಆ ಪಕ್ಷಪಾತವು!

**ಜಯ** :— ಇದೇ ಇದೇ ಆ ರಾಜದ್ರೋಹವು!

**ದುರ್ಯೋ**:— ಇಂತಹ ರಾಜದ್ರೋಹಿಗಳಿಂದ ಶತ್ರುಗಳ ಪಾರು ಪತ್ಯವು ಹೇಗಾಗುವುದು? ಕರ್ತವ್ಯವನ್ನು ದುರ್ಲಕ್ಷಿಸುವವನು ಅವನೆಂತಹ ಸೇನಾಪತಿಯು!

**ದ್ರೋಣ** :— ರಾಜಾ, ವಿವೇಕದ ಸೀಮೆಯನ್ನು ಅತಿಕ್ರಮಿಸಿದೆ. ನನ್ನ ಮರ್ಯಾದೆಯನ್ನು ಭಂಗಪಡಿಸಿದೆ. ನನ್ನ ಕರ್ತವ್ಯದಕ್ಷತೆಯಲ್ಲಿ ನ್ಯೂನತೆ ಯಾದದ್ದು ನಿನಗಾವಾಗ ಕಂಡುಬಂದಿತು?

**ಜಯ**:—ನಿನ್ನೆ ತಾವು ಅರ್ಜುನನೊಂದಿಗೆ ಬಾಣಯುದ್ಧವನ್ನು ಮಾಡು ತ್ತಿದ್ದಿರಲ್ಲ-ಆವಾಗ ಅದೇನು ಯುದ್ಧವೋ ಕಣ್ಣುಮುಚ್ಚಾಲೆಯ ಆಟವೋ?

**ದುಶ್ಯಾ**:—ಆಚಾರ್ಯರು ಕೈಯಿಂದ ಬಾಣಗಳ ಮಳೆ ಸುರಿಸುತ್ತಿದ್ದಿಲ್ಲ; ಮುಖದಿಂದ ಅರ್ಜುನನ ಪರಾಕ್ರಮವನ್ನೇ ಹೊಗಳುತ್ತಿದ್ದರು!

**ದ್ರೋಣ** :— ಇದರಲ್ಲಿ ಆಶ್ಚರ್ಯವೇನು? ಶಿಷ್ಯನ ಯುದ್ಧ ಚಾಪಲ್ಯ ವನ್ನು ನೋಡಿ ಗುರುವಿಗೆ ಸಂತೋಷವೆನಿಸುವದು ಸ್ವಾಭಾವಿಕವೆ. ಧನು

ಥಾರಿ ಪಾರ್ಥನ ಪರಾಕ್ರಮದ ಪ್ರಶಂಸೆಯನ್ನು, ಅವನ ಹಿತಚಿಂತಕರಷ್ಟೇ ಏಕೆ?, ಅವನ ಕಡುಹಗೆಗಳೂಕೂಡಾ ಮಾಡುವರು.

**ದುರ್ಯೋ** — ನನ್ನ ಪ್ರತ್ಯಕ್ಷದಲ್ಲಿಯೂ ಆ ಪಾರ್ಥನ ಪ್ರಶಂಸೆಯೇ! ಆ ಮರ್ಕಟನ ಪ್ರತಿಷ್ಠೆಯೇ! ಆಚಾರ್ಯರೇ ನೀವು ಕೌರವರ ಸೇನಾಪತಿಗಳೋ ಅಥವಾ ಪಾಂಡವರ ಪರಾಕ್ರಮವನ್ನು ಹೊಗಳುವ ಭಟ್ಟಂಗಿಗಳೋ? ನಿಮಗೆ ನಿಮ್ಮ ಕರ್ತವ್ಯದ ಅರಿವಿಲ್ಲದಿದ್ದರೂ ಈ ಸಮ್ರಾಟ ದುರ್ಯೋಧನನ ಸಾರ್ವಭೌಮತ್ವದ ಅಭಿಮಾನವು ಇರಲೇಬೇಕು. ಇದು ಪಕ್ಷಪಾತವು; ಇದು ವಿಶ್ವಾಸಘಾತಕವು!

**ದ್ರೋಣ**:— ಬಾಯಿಮುಚ್ಚು, ಮದಾಂಧಾ ಬಾಯಿಮುಚ್ಚು. ಈ ದ್ರೋಣಾಚಾರ್ಯನ ಪರಿಶುದ್ಧನಾದ ಮನಸ್ಸು ನಿನಗೂ, ಈ ಕ್ಷುದ್ರವಾದ ನಿನ್ನ ರಾಜಸತ್ತೆಗೂ ಸ್ವಲ್ಪಾದರೂ ಭಯಪಡುವದಿಲ್ಲ.

**ದುರ್ಯೋ**:— ಇದು ರಾಜಾಜ್ಞೆಯ ಉಲ್ಲಂಘನವು, ಸೇನಾಪತಿಯ ಅಧಿಕಾರದ ಅತಿಕ್ರಮಣವು.

**ದ್ರೋಣ**:— ಅಪಮಾನದಿಂದ ದೂಷಿತವಾದ ಈ ಸೇನಾಪತಿಯ ಅಧಿಕಾರದ ದೊಡ್ಡಸ್ತಿಕೆಯು ನನಗೆ ಬೇಡ ಇದೋ ಈಗಲೇ ಈ ವಿಷಪಾಶವನ್ನು ಹರಿದು ಬೀಸಾಡುವೆನು. ಈ ದ್ರೋಣನು ಇಂತಹ ಅಧಿಕಾರಕ್ಕೆ ಆಶೆ ಪಡತಕ್ಕವನಲ್ಲ. ಧರ್ಮಾಧರ್ಮದ ವಿಚಾರ ವಿಲ್ಲದವನೂ ನ್ಯಾಯನೀತಿಯನ್ನು ಬಿಟ್ಟವನೂ ಅವನೆಂತಹ ರಾಜನು? ಅವನಿಗೆ ರಾಜನೆನ್ನುವದಕ್ಕಿಂತ ಪಶುವೆನ್ನುವುದೇ ಯೋಗ್ಯವು!

**ದುರ್ಯೋ**:— (ತಡೆದು) ಗುರುದೇವಾ, ಶಾಂತರಾಗಿರಿ, ಶಾಂತರಾಗಿರಿ. ಮಾವಾ, ಕೆಲಸವು ಕೆಟ್ಟುಹೋಯಿತು. ಇನ್ನು ಮುಂದೆ ಹೇಗೆ?

**ಶಕುನಿ**:— ಬ್ರಾಹ್ಮಣನು ತಪ್ತನಾದನು. ಉಪಾಯದಿಂದ ಸವಿಮಾತಾಡಿ ಗಿಲೀಟು ಮಾಡು. ಹಂಚು ಕಾದು ಹೋಗಿದೆ. ಹೋಳಿಗೆಯನ್ನು ಬೇಯಿಸಿಕೋ. (ಕಿವಿಯಲ್ಲಿ ಪಿಸುಗುಟ್ಟುವನು.)

**ಜಯ**:— ಅಜ್ಞಾನಿಗಳಾದ ಶಿಷ್ಯರ ಅಪರಾಧಗಳನ್ನು ಆಚಾರ್ಯರು ಕ್ಷಮಿಸಬೇಕು. ನಿರರ್ಥಕವಾದ ಸಂಶಯವಾತವು ಸುತ್ತಿಕೊಂಡದ್ದರಿಂದ ನಮ್ಮಿಂದ ಇಂತಹ ಅವಿಚಾರವು ಜರುಗಿತು.

**ದುರ್ಯೋ**:— (ಕಾಲು ಹಿಡಿದು) ಗುರುವರ್ಯಾ—.

**ದ್ರೋಣ:**— ಭಲೆ, ಚನ್ನಾಗಿದೆ ನಿನ್ನ ರಾಜನೀತಿಯ ಶಿಷ್ಟಾಚಾರವು! ಮೊದಲು ಅವಮಾನ ಮಾಡೋಣ; ಆಮೇಲೆ ಅದನ್ನು ಕ್ಷಮಿಸುವದಕ್ಕಾಗಿ ಪಾದಗಳನ್ನು ಹಿಡಿಯೋಣ. ಈ ವಿದ್ಯೆಯು ನಿನ್ನಂತಹ ಕಪಟಿಯಾದ ರಾಜ್ಯ ಕರ್ತೃವಿಗೆ ಚೆನ್ನಾಗಿ ಸಾಧಿಸುವದು! ನಡೆ, ಬಿಡು, ನನ್ನ ಪಾದಗಳನ್ನು. ಅಪ ಶಬ್ದಗಳಿಂದ ಸಂಭಾವನೆ; ಸವಿ ಸವಿ ಮಾತುಗಳಿಂದ ಒಂಧನೆ! ಮೇಲೆ ಗುರು ಮಹಾರಾಜರೆಂದು ಗೌರವಿಸುವ ಬಣ್ಣದ ಪ್ರಾರ್ಥನೆ.

**ದುರ್ಯೋ:**— ಆಚಾರ್ಯರು ಕೋಪವನ್ನು ನುಂಗಿಕೊಂಡು ಉದಾರ ಬುದ್ಧಿಯಿಂದ ನಮ್ಮನ್ನು ಕ್ಷಮಿಸಬೇಕು. ಅರ್ಜುನನ ಮೇಲಿದ್ದ ಶಿಷ್ಯಸಂಬಂಧ ವಾದ ವಾತ್ಸಲ್ಯವನ್ನು ಬದಿಗಿಟ್ಟು ರಣಾಂಗಣದಲ್ಲಿ ಪಾಂಡವರನ್ನು ಕಡುವೈರಿ ಗಳೆಂದು ತಿಳಿಯಬೇಕು.

**ದ್ರೋಣ:**— ನಾನು ರಣಾಂಗಣದಲ್ಲಿ ಪಾಂಡವರನ್ನು ಬದ್ಧವೈರಿಗ ಳಂತೆಯೇ ತಿಳಿಯುತ್ತ ಬಂದಿರುವೆನು. ಈ ವಿಷಯವಾಗಿ ನಿನ್ನ ಸಂಶಯ ಪರಿಹಾರಕ್ಕೆ ನಾನು—ಯಾವ ಪ್ರಮಾಣವನ್ನು ಮಾಡಲಿ ಹೇಳು?

**ಶಕುನಿ:**— (ಕಿವಿಯಲ್ಲಿ) ಹೂ, ದುರ್ಯೋಧನಾ ನಿಷ್ಪಾಂಡವ ವೃಷ್ಟಿ ಯನ್ನು ಮಾಡುವ ವಿಷಯವಾಗಿ ವಚನವನ್ನು ತೆಗೆದುಕೋ. ಇದೇ ಸಮಯ.

**ದುರ್ಯೋ:**— ಈ ವಿಷಯವಾಗಿ ಆಚಾರ್ಯರು ವಚನವನ್ನು ಕೊಡ ಬೇಕು.

**ದ್ರೋಣ:**— ವಚನವೇ! ಎಂತಹ ವಚನ? ಪ್ರಾಮಾಣಿಕ ಮನುಷ್ಯನ ಮಾತಿನಲ್ಲಿ ನಂಬುಗೆಯನ್ನಿಡುವಷ್ಟು ಅರಸನ ಬುದ್ಧಿಯು ಸರಲವಾಗಿರುವುದೊ?

**ದುರ್ಯೋ:** ಆಚಾರ್ಯರ ವಚನದಲ್ಲಿ ವಿಶ್ವಾಸವಿದೆ; ಆದರೆ.... ...

**ಜಯ:**— ಮತ್ತು ಆಚಾರ್ಯರ ಪರಾಕ್ರಮದ ವಿಷಯವಾಗಿಯೂ ವಿಶ್ವಾಸವಿದೆ; ಆದರೆ........

**ಶಕುನಿ:**—(ಒಂದು ಮಗ್ಗುಲಾಗಿ) ದುರ್ಯೋಧನಾ, ಹೇಳಿ ಕೇಳಿ ಬ್ರಾಹ್ಮಣ ಬ್ರಾಹ್ಮಣನ ಮಾತುಗಳನ್ನು ನಂಬಬೇಡ. ಏನಾದರೂ ಪ್ರತಿಜ್ಞೆಯನ್ನು ಮಾಡುವುದಕ್ಕೆ ಹೇಳು. (ಕಿವಿಯಲ್ಲಿ ಮಾತನಾಡುವನು)

**ದ್ರೋಣ:**— ಏನದು ಕಿವಿಮಾತುಗಳು?

**ಶಕುನಿ:**— ಛೆ, ಛೆ. ಏನೂ ಇಲ್ಲ—ಆದರೆ-—

**ದ್ರೋಣ:**-— ಆದರೆ, ಆದರೆ ಏನು? ನಿಮಗೆ ನನ್ನಿಂದ ಏನಾದರೂ

ಪ್ರತಿಜ್ಞೆ ಬೇಕಲ್ಲವೆ? ಈ ದಿವನ ಪಾಂಡವರ ಪರಾಜಯವಾಗಿ, ಅವರ ಕಡೆಯ ಮಹಾವೀರರನ್ನು ಧಾರಾತೀರ್ಥದಲ್ಲಿ ಬೀಳಿಸುವಂತೆ ಪ್ರತಿಜ್ಞೆ ಬೇಕೆ? ಕೇಳಿ ಹಾಗಾದರೆ—ಪಂಚಮಹಾಭೂತಗಳ ಸಾಕ್ಷಿಯಾಗಿ, ನಾನು ಪ್ರತಿಜ್ಞ ಮಾಡು ವುದೇನಂದರೆ, ಇಂದು ಈ ದ್ರೋಣನು ಅಭೇದ್ಯಚಕ್ರವ್ಯೂಹವನ್ನು ರಚಿಸಿ ಧರ್ಮರಾಜನನ್ನು ಜೀವಂತವಾಗಿ ಬಂಧಿಸಿ ನಿಮ್ಮ ಸ್ವಾಧೀನವಡಿಸುವೆನು, ಮತ್ತು ಆ ಚಕ್ರವ್ಯೂಹವು ಪಾಂಡವ ವೀರರಲ್ಲಿ ಯಾರನ್ನಾದರೂ ಬಲಿದಾನ ತಕ್ಕೊಳ್ಳುವುದು; ಮತ್ತು ಒಂದು ಕೋಟಿ ಪಾಂಡವರ ಸೈನ್ಯವನ್ನು ಮಣ್ಣು ಮುಕ್ಕಿಸುವುದು!

**ಎಲ್ಲರೂ :—** ( ಆನಂದದಿಂದ ) ಏನು ಚಕ್ರವ್ಯೂಹ ! ಅಭೇದ್ಯ ಚಕ್ರ ವ್ಯೂಹ !

**ದ್ರೋಣ :—** ಹೌದು, ಆ ಚಕ್ರವ್ಯೂಹವನ್ನು ಭೇದಿಸಲು ತ್ರಿಭುವನ ದಲ್ಲಿ ಒಬ್ಬನೆ ಒಬ್ಬ ಪರಾಕ್ರಮಶಾಲಿಯಾದ ವೀರಶಿರೋಮಣಿಯು ಸಮರ್ಥ ನಾಗಿರುವನು.

**ಎಲ್ಲರೂ :—** ಯಾರು? ಯಾರವನು ?

**ದ್ರೋಣ :—** ವೀರಶ್ರೇಷ್ಠ ಪಾರ್ಥನು ! ಆದರೆ ಶ್ರೀಕೃಷ್ಣನ ಜೊತೆ ಯಲ್ಲಿ ಅರ್ಜುನನನ್ನು ಸಂಶಪ್ತಕರೊಡನೆ ಯುದ್ಧ ಮಾಡುವುದಕ್ಕೆ ತೊಡಗಿಸಿದ ಮೇಲೆ, ಅವನಿಗೆ ಚಕ್ರವ್ಯೂಹದ ಕಡೆಗೆ ತಿರುಗಿ ನೋಡುವುದಕ್ಕೆ ಸಹ ಅವಕಾಶ ದೊರೆಯುವದಿಲ್ಲ.

**ಶಕುನಿ :—** ಅಹಹಾ, ಎಂತಹ ಮುತ್ಸದ್ದಿತನವಿದು !

**ದುರ್ಯೋ :—** ಎಂತಹ ಯುದ್ಧ ಕೌಶಲ್ಯವಿದು !

**ಜಯ :—** ಎಂತಹ ಘನಘೋರ ಪ್ರತಿಜ್ಞೆಯಿದು !

**ದುಶ್ಶಾ :—** ( ಒತ್ತಟ್ಟಿಗೆ ) ಮಾವಾ, ಈ ಬ್ರಾಹ್ಮಣನನ್ನು ರೇಗಿ ಸಿದ್ದರಿಂದಲೇ ಈ ಪ್ರತಿಜ್ಞೆಯು ಪದರಿನಲ್ಲಿ ಬಿತ್ತು.

**ಶಕುನಿ :—** ಎಲವೋ ನಗಾರಿಯನ್ನು ಕಾಸಿದಷ್ಟು ಗರ್ಜನೆಯು ಗಂಭೀರವಾಗಿ ಹೊರಡುವುದಲ್ಲವೇ ?

**ಜಯ :—** ಆನಂದವು, ಅತ್ಯಾನಂದವು ! ಈ ದಿವಸ ಚಕ್ರವ್ಯೂಹದಲ್ಲಿ-

**ದ್ರೋಣ :—** ಜಯದ್ರಥಾ, ನೀನು ಇಷ್ಟರಲ್ಲಿಯೇ ಹರ್ಷಿತನಾಗ ಬೇಡ; ಚಕ್ರವ್ಯೂಹವನ್ನು ರಚಿಸಿದರೂ ಯಾವ ಪ್ರಕಾರದ ಧರ್ಮ

ಯುದ್ಧಕ್ಕೆ ಬಾಧೆ ತರುವಂಥ ಅಧರ್ಮವನ್ನು ನಾನು ಯಾರಿಂದಲೂ ಮಾಡ ಗೊಡತಕ್ಕವನಲ್ಲ. ನಡೆಯಿರಿ. ಚಕ್ರವ್ಯೂಹದ ಸಿದ್ಧತೆಯನ್ನು ಒಳ್ಳೇ ಜಾಗ್ರತೆ ಯಾಗಿ ಮಾಡೋಣ.

**ಜಯ :**— ಈ ಕಾಲಕ್ಕೆ ಈ ಜಯದ್ರಥನಿಗೆ ಯಾಕೆ ಆನಂದವೆನಿಸ ಬಾರದು ? ಈ ದಿವಸ ಜಯದ್ರಥನ ಅಪಮಾನದ ಯಜ್ಞದಲ್ಲಿ ಪಾಂಡವ ವೀರರ ರುಂಡಗಳನ್ನು ಚಂಡಾಡಿ ಪೂರ್ಣಾಹುತಿ ಕೊಟ್ಟು ಶಾಂತಗೊಳಿಸುವೆನು.

**ಶಕುನಿ :**— ನಡೆಯಿರಿ. ಶುಭಸ್ಯ ಶೀಘ್ರಂ.

ರಾಗ—ದೇಸಕಾರ, ತಾಳ—ತ್ರಿವಟ.

ರಣರಂಗದೇ ವೀರರಾಗಿ । ಭಯವ ಪಡದೆ ಅರಿಯ ಹೃದಯ ।
ಭೇದಿಸುತೆ ! ಚತುರತನದೇ ॥ಪಲ್ಲ॥
ಧರೆಯ ಚಕಿತಗೊಳಿಸಿ । ಸರಸಾಗಿ ಮುರವೈರಿಯ ಮನವನು ।
ಮರುಳುಗೊಳಿಸಿ ಮೆರೆಯಿರಿ ಕೌರವರೇ ॥ ೧ ॥

**ದುರ್ಯೋ :**— ಆಚಾರ್ಯರ ಅನುಗ್ರಹವು ನಮ್ಮ ಮೇಲೆ ಹೀಗೆಯೇ ಸಂತತವಾಗಿರಬೇಕೆಂದು ಪ್ರಾರ್ಥಿಸುವೆನು. ( ಕಾಲು ಹಿಡಿಯುವನು. )

—( ತೆರೆ ಬೀಳುವುದು )—

# ಎರಡನೆಯ ಪ್ರಸಂಗ

[ ಪಾಂಡವರ ಬೀಡಾರದ ಸುತ್ತು ಮುತ್ತಲಿನ ಪ್ರದೇಶ. ಮೇಘನಾದನು ಭಯ ಗ್ರಸ್ತನಾಗಿ ಪ್ರವೇಶ ಮಾಡುವನು. ]

**ಮೇಘನಾದ :**— ಧಿಕ್ಕಾರ ಧಿಕ್ಕಾರವಿರಲಿ ಈ ಸ್ತ್ರೀಯರಿಗೆ ! ಪರಮೇಶ್ವರಾ, ಈ ಮೇಘನಾದನನ್ನು ದುಷ್ಟ ಸ್ತ್ರೀಯರ ಜಾಲದಿಂದ ನೀನೇ ರಕ್ಷಿಸು ! ( ನೋಡಿ ) ಅಯ್ಯೋ ವಿಧಿಯೇ, ಈ ಸಂಕ್ರಮಣವು ನನ್ನ ಮೇಲೆ ಬರುವಂತೆಯೆ ತೋರುವದು. ಚಕ್ರವ್ಯೂಹದ ಸಮಾಚಾರವನ್ನು ನಮ್ಮ ಚಿಕ್ಕಮೊರೆಗಳಾದ ಅಭಿಮನ್ಯುಮಹಾರಾಜರಿಗೆ ತಿಳಿಸುವುದಕ್ಕೆ ಬಂದಿರಲು ಅದಕ್ಕೆ ಬದಲು ನಾನೇ ಈ ಬೆಡಗಿನ ಹುಡುಗೆಯರ ಚಕ್ರವ್ಯೂಹದಲ್ಲಿ ಸಿಕ್ಕು ಬಳಲಬೇಕಾಯಿತು ! ಈ ರಕ್ಕಸಿಯರ ತಂಡವು ಇತ್ತ ಕಡೆಗೇ ಬಂದಿತು. ಈ ಬಣ್ಣದ ಬಾಲೆಯರು ನನ್ನ ಶೋಧನೆಯನ್ನೇ ಮಾಡುತ್ತಿರುವರು. ಮೇಘನಾದಾ, ಮುಗಿಯಿತು

ಧಿಕ್ಕಾರವು, ಧಿಕ್ಕಾರವು. ಇವರು ಇತ್ತಕಡೆಗೇ ಬಂದರು. ಇನ್ನು ಎಲ್ಲಿ ಮರೆಯಾಗಲಿ? ಇತ್ತಕಡೆಗೂ ಸ್ತ್ರೀಯರು, ಅತ್ತಕಡೆಗೂ ಸ್ತ್ರೀಯರು; ನಾಲ್ಕೂ ದಿಕ್ಕಿನಿಂದಲೂ ಬಂತು ದಾಳಿ! (ಪರದೆಯಲ್ಲಿ—ಯಾರೇ ಯಾರವನು ಕಳ್ಳನು!) ಏನು, ನಾನು ಕಳ್ಳನೇ? ಈ ಮೇಘನಾದನು ಕಳ್ಳನೆಂದು ಹೇಳಿದವಳು ಯಾರವಳು ವಾಚಾಳಿಯು. [ನೋಡಿ] ಓಹೋ, ಇವಳೆ! ನಮ್ಮ ಸೌದಾಮಿನಿ. ನಾನು ಎಂತಹ ಮಹಾಬಲಾಢ್ಯ ವೀರ. ಆದರೆ ಸ್ತ್ರೀಯರಿಂದ ಭೀತಿ! ಇನ್ನು ಎಲ್ಲಿಯಾದರೂ ಮರೆಯಾಗಿ ಸಮಯವನ್ನು ಸಾಧಿಸಿ ಪಾರಾಗಬೇಕು.

(ಅಡಗುವನು. ಸೌದಾಮಿನಿ, ಮಲ್ಲಿಕೆ, ಕುಮುದ್ವತಿ, ಚಂದ್ರಿಕೆ, ವಿಲಾಸಿನಿಯರು ಎರಡೂ ಬದಿಗಳಿಂದ ಪ್ರವೇಶಿಸುವರು)

**ಸೌದಾಮಿನಿಃ**— ಯಾವನೇ ಯಾವನವನು ಕಳ್ಳನು? ಅಮ್ಮಯ್ಯಾ, ಈಗ ಇಲ್ಲಿಯೇ ಇದ್ದನು ಇಷ್ಟರಲ್ಲಿಯೇ ಎಲ್ಲಿ ಹೋದನು? ಬಿಡಾರದ, ಸುತ್ತಲೂ ಕಳ್ಳನಂತೆ ಮರೆಯಾಗಿ ಸುತ್ತುತ್ತಿದ್ದನು. ಭೂತವೊ ಬ್ರಹ್ಮಸಂಬಂಧವೊ—

**ಮೇಘಃ**— (ಬಂದು ಮಗ್ಗಲಿಗೆ) ಬಹ್ಮಸಂಬಂಧವೇ! ಸಂತೋಷವು! ಇದೋ ಇವಳೇ ನೋಡಿ, ಈ ಮೇಘನಾದನ ಪ್ರೀತಿಯ ಹೆಂಡತಿ. ಇವಳಿಗೆ ತನ್ನ ಪ್ರಿಯಪತಿಯು ಭೂತಾಕಾರನಾಗಿ ತೋರುವನು. ಧನ್ಯಳು, ಧನ್ಯಳು ಎಂತಹ ಪತಿವ್ರತಾಶಿರೋಮಣಿಯಳು. ಧಿಕ್ಕಾರ-ಧಿಕ್ಕಾರ ಧಿಕ್ಕಾರವಿರಲಿ! ಈ ಸ್ತ್ರೀಯರಿಗೆ.

**ಮಲ್ಲಿಕಾಃ**— ಸೌದಾಮಿನಿ ನನಗೆ ಸಂದೇಹವುಂಟಾಗುವದು. ಆವನು ಯಾವನಾದರೂ ಶತ್ರುಪಕ್ಷದ ಗೂಢಚಾರನಿರಬಹುದೆ? ಮತ್ತೆ ಆವನು ನಮ್ಮ ಉತ್ತರಾದೇವಿಯವರ ಬಿಡಾರದ ಸುತ್ತಲೇ ಸುತ್ತುತ್ತಿರುವನಲ್ಲ.

**ಕುಮುದ್ವತಿ**— ಮಲ್ಲಿಕೆ, ನಿಶ್ಚಯ, ನಿಶ್ಚಯ. ಅವನು ಗೂಢಚಾರನೇ ಇರಬಹುದು. ಛೇ ಅಲ್ಲ. ಅವನು ಈ ಸೌದಾಮಿನಿಯ ಪತಿಯಾದ ಮೇಘನಾದನೇ ಇರಬಹುದು. ಚಿಕ್ಕದೊರೆಗಳನ್ನು ಹುಡುಕುತ್ತಲಿರಬಹುದು, ಮತ್ತೇನು? ಹೌದಲ್ಲವೆ ಚಂದ್ರಿಕೆ?

**ಚಂದ್ರಿಕೆಃ**— ಅಭಿಮನ್ಯು ಮಹಾರಾಜರು ಅವನಿಗೆಲ್ಲಿ ಸಿಕ್ಕುವರು? ನಾವೇ ಅವರನ್ನು ಹುಡುಕುತ್ತಿರುವೆವು.

**ಮೇಘಃ**— (ಸ್ವಗತ) ಅಂದರೆ- ಈ ಸಂಕ್ರಮಣವು ಚಿಕ್ಕದೊರೆಗಳ ಮೇಲೆಯೂ ಬೀಳುವುದೋ ಏನು? ಈ ಹೊಯ್ಯಾಲಿಯರು ಸವಿ ಸವಿ ಮಾತುಗಳನ್ನಾಡಿ ಪುರುಷರನ್ನು ಮರುಳುಗೊಳಿಸಿ ಎಂತಹ ದುರವಸ್ಥೆಗೆ ಗುರಿಮಾಡು

ವರೊ ಏನೋ-ಎಂಬುದು ಬ್ರಹ್ಮದೇವನ ಅಪ್ಪನಿಗೂ ತಿಳಿಯಲಾರದು. ಧಿಕ್ಕಾರ-ಧಿಕ್ಕಾರವಿರಲಿ ಈ ಸ್ತ್ರೀಯರಿಗೆ!

**ವಿಲಾಸಿನಿ:**— ನಡೆಯಿರಿನ್ನು, ಉತ್ತರಾದೇವಿಯವರು ಮಹಾರಾಜರನ್ನು ಕರೆತರುವುದಕ್ಕೆ ಹೇಳಿರುವರಷ್ಟೆ, ನಡೆಯಿರಿ ಹಾಗಾದರೆ. ಈ ಹಾರ ತುರಾಯಿಗಳು ಬಾಡಿಹೋದಾವು.

**ಮೇಘ:**— ( ಸ್ವಗತ ) ಆ ಹಾರವನ್ನು ನನ್ನ ಕೊರಳಲ್ಲಿ ಹಾಕಿರಿ ; ಈ ಹುಡುಗೆಯರ ಕೋಮಲ ಕರಗಳ ಹಾರವಿಲ್ಲದಿದ್ದರೆ ಇಲ್ಲ. ಇವರ ಹಸ್ತದಿಂದ ಪೋಣಿಸಲ್ಪಟ್ಟ ಪುಷ್ಪಹಾರವಾದರೂ ( ಚೀಕರಿಸುವನು )

**ಚಂದ್ರಿಕಾ:**— ಅದೇನು ಸದ್ದು ?

**ಸೌದಾ:**— ಯಾವುದಾದರೂ ನಾಯಿ ನರಿ ಇದ್ದೀತು! ಯುದ್ಧವು ಪ್ರಾರಂಭ ವಾದಂದಿನಿಂದ ಈ ನಾಯಿನರಿಗಳಿಗೆ ಹಬ್ಬವಾಗಿದೆ. ಸಮೃದ್ಧಿಯಾಗಿ ಪ್ರೇತಗಳ ಸಂತರ್ಪಣೆ ದೊರೆಯುವದಿಲ್ಲವೆ?

**ಮಲ್ಲಿಕಾ:**— ನಿಶ್ಚಯ! ನಾಯಿ ನರಿಯೇ ಆಗಿರಬಹುದು.

**ಮೇಘ:**— ( ಸ್ವಗತ ) ಶಟವಿಯರೇ ನಿಮ್ಮಪ್ಪ ಮೇಘನಾದನೇ ಇಲ್ಲಿ ನಿಂತಿರುವನು, ತಿಳಿಯಿತೆ? ನಾಯಿಯೋ ನರಿಯೋ ಗೊತ್ತಾಗುವುದು ತಾಳಿ.

**ಕುಮು:**— ನಾಯಿಯೂ ಅಲ್ಲ, ನರಿಯೂ ಅಲ್ಲ. ಈ ಸೌದಾಮಿನಿಯ ಗಂಡ, ಆ ಮೇಘನಾದನೇ ಬಂದಿರಬಹುದು -ಇವಳನ್ನು ಕಾಣಲಿಕ್ಕೆ. ನಮ್ಮನ್ನು ನೋಡಿ ಎಲ್ಲಿಯಾದರೂ ಮರೆಯಾಗಿ ನಿಂತಿರಬಹುದು.

**ಸೌದಾ:**— ಶಟವಿಯರೇ, ನಾಕುಮಾಡಿರಿ ಕುಚೇಷ್ಟೆಯನ್ನು.

**ಮಲ್ಲಿಕಾ:**— ಒಳ್ಳೇದಮ್ಮಾ ನಾನು ಹೊರಡುವೆನು ಆಯಿತೆ.

**ಮೇಘ:**— ನೋಡಿ ನೋಡಿ. ಹೇಗೆ ನಡೆಯುವಳು ಚೋಳಬಾಣದಂತೆ. ಚಲ್ ಪಿಲ್, ಚಲ್ ಪಿಲ್.

**ಸೌದಾ:**— ಅಮಯ್ಯಾ, ಯಾರದು ?

**ಮಲ್ಲಿಕಾ:**— ಶತ್ರುಪಕ್ಷದ ಗೂಢಚಾರನೇ ಅವನು. ನಡೆಯಿರಿ, ಅವನನ್ನು ಶೋಧಿಸಿ ಚೆನ್ನಾಗಿ ಸಮಾಚಾರ ತೆಗೆದು ಕೊಳ್ಳೋಣ. ( ಹೋಗುವರು )

**ಸೌದಾ:**— ಬೇಕಾದಹಾಗೆ ಶೋಧಿಸಿರಿ, ನಿಮಗೆ ಕೆಲಸವೇನು! ಮಹಾರಾಣಿಯವರು ಕೋಪಿಸಬಹುದು, ನಾನೇ ಹೊಗುವೆನು. ( ಹೋಗುವಳು )

**ಮೇಘ:**— ಧಿಕ್ಕಾರ ಧಿಕ್ಕಾರವಿರಲಿ ಈ ಸ್ತ್ರೀಯರಿಗೆ. ಈ ಪ್ರಾರಬ್ಧ

ವನ್ನು ತಪ್ಪಿಸುವುದು ಹೇಗೆ? ಅದೋ ಮತ್ತೆ ಅವರು ಇತ್ತಕಡೆಗೇ ತಿರುಗಿದರು. ಇನ್ನು ಹೊಗೋಣ. ( ತಡೆದು ) ಆದರೆ ಹೋಗುವುದಾದರೂ ಎಲ್ಲಿಗೆ? ಇಲ್ಲಿಯೇ ಮುಖವನ್ನು ಮುಚ್ಚಿಕೊಂಡು ( ನೋಡಿ ) ಹಾ ಒಳ್ಳೇ ನೆನವಾಯಿತು. ಮೈ ಮೇಲಿನ ಈ ಶಾಲಿನ ಮುಸುಕಿಟ್ಟುಕೊಂಡು ಒಂದು ಮಗ್ಗಲಿಗೆ ಕೂಡೋಣ ಎಲಾ ಇದೇನು! ಗಡಬಿಡಿಯಲ್ಲಿ ಮನೆಯಿಂದ ಶಾಲು ತರುವುದಕ್ಕೆ ಬದಲು ನಮ್ಮ ಹೆಂಡತಿಯವರ ಸೀರೆ ತಂದಿರುವೆನಲ್ಲ! ಹೋಗಲಿ ಇದನ್ನೇ ಉಟ್ಟು ಕೊಳ್ಳೋಣ; ಮತ್ತು ಏನು ಚಮತ್ಕಾರವಾಗುವುದೊ ನೋಡೋಣ. —

[ಸೀರೆಯನ್ನು ಉಡುವನು]

-ಈ ಸೀರೆಯಲ್ಲಿ ಎಂತಹ ಚಮತ್ಕಾರವಿರುವುದು! ನೋಡಿ. ನಾನು ಈ ಸೀರೆಯು ನ್ನುಟ್ಟುಕೊಂಡ ಮಾತ್ರಕ್ಕೆ ತನ್ನಷ್ಟಕ್ಕೆ ತಾನೇ ಈ ಗೊಣ ಸೊಬಗಿನಿಂದ ತೂಗ ತೊಡಗಿತು. ಸೊಂಟವು ಒಯ್ಯಾರದಿಂದ ಬಳುಕ ತೊಡಗಿತು. ( ಒಯ್ಯಾರದಿಂದ ನಡೆಯುವನು) ಅಮ್ಮಯ್ಯಾ.( ಮಲ್ಲಿಕಾ, ಚಂದ್ರಿಕಾ ಮೊದಲಾದವರು ಪ್ರವೇಶಿಸುವರು)

**ಚಂದ್ರಿಕಾ:**— ಎಲ್ಲಿಯೂ ಆಕಳ್ಳನ ಸುಳುವೇ ಇಲ್ಲವಲ್ಲ! ( ನೋಡಿ ) ಅಮ್ಮಯ್ಯಾ ಈ ಸ್ತ್ರೀಯು ಯಾರು?

**ಮೇಘ:**— [ ಸ್ವಗತ ] ನಾನೇನೊ ರಣದಲ್ಲಿ ಶೂರ; ಆದರೆ ಸ್ತ್ರೀಯರ ಮುಂದೆ ಮಾತ್ರ ಉತ್ತರಕುಮಾರ!

**ಮಲ್ಲಿಕಾ:**— ಯಾರಮ್ಮ ನೀನು? ಎಲ್ಲಿಯವಳು? ಚೆನ್ನಾಗಿ ಹೇಳು!

**ಮೇಘ:**— ಊ ಹೂ.

**ಚಂದ್ರಿಕಾ:**— ನಿನ್ನ ಹೆಸರೇನು?

**ಮೇಘ:**— ಊ ಹೂ.

**ವಿಲಾ:**— ಇಲ್ಲಿ ನಿನ್ನದೇನು ಕೆಲಸ?

**ಮೇಘ:**— ಊ ಹೂ.

**ಕುಮು:**— ನಿನ್ನ ತಲೆ, ಎಲ್ಲಕ್ಕೂ ಊ ಹೂ ಅಂದರೆ ಏನು ತಿಳಿಯ ಬೇಕು? ಮೋಸಗಾರತೀ, ಮಾತಾಡುವದಿಲ್ಲವೆ? [ ಎಲ್ಲರೂ ಹೊಡೆಯುವರು ]

**ಮೇಘ:**— ಅಮ್ಮಾ ಹೊಡೆಯ ಬೇಡಿರಿ. (ಸ್ವಗತ) ಈ ಹುಡುಗೆಯರ ಏಟು ಬಿದ್ದಕೂಡಲೆ ನನ್ನ ಶರೀರವು ಒಳ್ಳೇ ಮೆತ್ತಗಾಯಿತು. (ಪ್ರಕಾಶ) ಅಮ್ಮಾ ನಾನೊರ್ವ ಅನಾಥ ಸ್ತ್ರೀಯು.

**ಚಂದ್ರಿಕಾ:**— ನಿನ್ನ ಹೆಸರೇನು?

**ಮೋಘ**:— (ಸ್ವಗತ) ಮೇಘನಾದಾ, ವೇಷವನ್ನು ಬದಲಿಸಿದಂತೆ ಹೆಸರನ್ನೂ ಬದಲಿಸುವದಕ್ಕೆ ಅವಕಾಶವೇಕೆ? (ಪ್ರಕಟ) ನನ್ನ ಹೆಸರು ಶಂಖಿಣಿ.

**ಮಲ್ಲಿಕಾ**:— ಏನು ಶಂಖಿಣಿಯೇ! (ಎಲ್ಲರೂ ನಗುವರು) ಇರಲಿ. ನಿನ್ನ ತಂದೆ ತಾಯಿಗಳಾರು? ನಿನ್ನ ಲಗ್ನವಾಗಿದೆಯೇ? ನಿನ್ನ ಮನೆಯೆಲ್ಲಿದೆ? ಇಲ್ಲಿಗೆ ಏತಕ್ಕೆ ಬಂದೆ?

**ಮೋಘ**:— ಇವೇನು ಪ್ರಶ್ನೆಗಳೋ, ಫಿರಂಗಿ ಗುಂಡುಗಳೋ? ಅಮ್ಮಾ, ನನ್ನ ಕರ್ಮ ಕಥೆಯನ್ನು ಕೇಳಿರಿ. ಈ ನಡೆದ ಯುದ್ಧದಲ್ಲಿ ನನ್ನ ತಂದೆಯು ಮೃತನಾದನು. ತಾಯಿಯು ಎಲ್ಲಿ ಹೋದಳೊ ಗೊತ್ತಿಲ್ಲ. ನಾನು ಕುಮಾರಿ. [ಸ್ವಗತ] ಪ್ರಾಯಕ್ಕೆ ಬಂದ ಒಳ್ಳೇ ದಿವ್ಯ ಕುಮಾರನು.

**ವಿಲಾ**:— ನಾಕು ಮುಗಿಸು ನಿನ್ನ ಕರ್ಮಕಥೆಯನ್ನು. ನಿನಗೇನಾದರೂ ಗಾಯನ ನರ್ತನ ಬರುವುದೆ?

**ಮೋಘ**:— (ಸ್ವಗತ) ಆಯ್ಯೋ ವಿಧಿಯೆ. ಈ ಸ್ತ್ರೀಯರು ಇನ್ನುಮೇಲೆ ನನಗೆ ನರ್ತನ ಮಾಡಲಿಕ್ಕೆ ಹೇಳುವರೊ ಏನು? ಪರಮೇಶ್ವರಾ, ಧಿಕ್ಕಾರ ಧಿಕ್ಕಾರವಿರಲಿ ಈ ಸ್ತ್ರೀಯರಿಗೆ. (ಪ್ರಕಾಶ. ಅಳುವ ದನಿಯಲ್ಲಿ) ಅಮ್ಮಾ ನಿಮ್ಮ ಹಾಗೆ ನರ್ತನ ಮಾಡುವುದಕ್ಕೆ ಬರುವದಿಲ್ಲ.

**ಕುಮು**:— ಅಮ್ಮಾ, ನಿನಗೆ ಹಾಡಲಿಕ್ಕೂ ಕುಣಿಯಲಿಕ್ಕೂ ಬರುತ್ತಿದ್ದರೆ ನಮ್ಮ ಮಹಾರಾಣಿಯವರಲ್ಲಿ ಕೆಲಸವು ದೊರೆಯಬಹುದಾಗಿತ್ತು. ಇರಲಿ—ನಾವೇ ನಿನಗೆ ನರ್ತನವನ್ನು ಕಲಿಸುತ್ತೇವೆ.

**ಸರ್ವರೂ**:— ಓಹೊ, ನಾವೂ ಕಲಿಸುತ್ತೇವೆ.

**ಚಂದ್ರಿಕಾ**:— ಹೂ. ಈಗಲೇ ಪ್ರಾರಂಭವಾಗಲಿ. ಶ್ರೀ ಗಣೇಶಾಯ ನಮಃ

**ವಿಲಾ**:— ಹೂ. ಪ್ರಾರಂಭಿಸು ಚುಂ, ಛೂಂ! ಛಕ, ಛೂಂ.

ರಾಗ—ಯಮುನ, ತಾಳ:—ತ್ರಿವಟ

ಬಾಬಾಬಾ ಸಡಗರದಲಿ। ಸೊಬಗಿನ ಕುಣಿತವ
ಕಲಿಸುವೆ ಪ್ರಿಯಸಖಿ ॥ ೧ ॥

[ಸರ್ವರೂ ಮೇಘನಾದೊಡನೆ ನರ್ತನ ಮಾಡುವಾಗ ಸೌದಾಮಿನಿ ಬರುವಳು]

**ಸೌದಾ**:— ಏನೇ, ಅತ್ತಕಡೆಗೆ ಉತ್ತರಾ ಮಹಾರಾಣಿಯವರು

ತೋಟದಲ್ಲಿ ನಿಮ್ಮ ಮಾರ್ಗ ನಿರೀಕ್ಷಿಸುತ್ತಿರುವರು. ಇತ್ತಕಡೆಗೆ ನೀವು ಗಾಯನ ನರ್ತನಗಳನ್ನು ಪ್ರಾರಂಭಿಸಿರುವಿರೇನು? ಬೇಷ್. ಬೇಷ್! ನಾಚಿಕೆ ಯಾಗುವು ದಿಲ್ಲವೆ ನಿಮಗೆ? ಇವಳಾರು ಮತ್ತೆ, ದುರ್ಗಾದೇವಿ ? ಏನೆ ದಡಿಯಮ್ಮಾ, ಯಾರು ನೀನು ?

**ಮೇಘಾ**:– [ ಸ್ವಗತ ] ಬ್ರಹ್ಮ ಸಂಬಂಧಕ್ಕೆ ಸೋದರಮಾವ.

**ಸೌದಾ**:— ಯಾಕೆ ಮಾತಾಡುವುದಿಲ್ಲ ! ನಿನ್ನ ನಾಲಿಗೆಯು ಕಳಚಿ ಬಿಟ್ಟಿತೆ ?

**ಮೇಘಾ**:— ( ಸ್ವಗತ ) ಹೀಗೆ ಕೆನ್ನೆಯ ಮೇಲೆ ಒಂದು ಏಟು ಹಾಕಲೆ?

**ಸೌದಾ**:— ಯಾರೇ ನೀನು ಗಟ್ಟಿಗಳು, ಮಾತಾಡುವದಿಲ್ಲವೇಕೆ ?

**ಮೇಘಾ**:— [ ಸ್ವಗತ ] ನಮ್ಮ ಅವನಾಸ ಕಾಲವು ನಮೀಪಿಸಿತು.

**ಸೌದಾ**:— ( ಮುಖದ ಮೇಲಿನ ಸೆರಗು ತೆಗೆದು ) ಎಲ್ಲಿ, ಕೊಂಚ ನಿನು ಮುಖವನ್ನು ತೋರಿಸು?

**ಮೇಘಾ**:— ಹೇಗೆ ತೋರಿಸಲಿ ಮುಖವನ್ನು –[ ತೋರಿಸುವನು ]

**ಸರ್ವರು**:— ಅಮ್ಮಯ್ಯಾ ಮೇಘನಾದನು ! ( ನಗುವರು )

**ಮೇಘಾ**:— ಹೊಡೆಯಿರಿ ಜೋರಾಗಿ ಶಂಖವನ್ನು ! (ಓಡಿಹೋಗುವನು)

**ಸೌದಾ**:— ಹಲ್ಲು ಕಿರಿಯುತ್ತ ಹೀಗೇಕೆ ನಿಂತಿರುವಿರಿ ! ನಡೆಯಿರಿ ನಡೆಯಿರಿನ್ನು.

**ಕುಮು**:— ಒಳ್ಳೇ ದುರ್ದೆಶೆಯಾಯಿತು.

**ವಿಲಾ**:— ಆದರೆ ಕುಮುದ್ವತಿ, ಇವನೆಂಥ ಗಂಡನೆ ಹೆಣ್ಣುಮೂಳ ಲಜ್ಜೆಗೇಡಿ !

**ಚಂದ್ರಿಕೆ**:— ಬೇಡಮ್ಮಾ ಇಂತಹ ಪ್ರಸಂಗವು ವೈರಿಗೆ ಕೂಡಾ ಬರ ಬಾರದು.

**ಮಲ್ಲಿಕಾ**:— ಪ್ರಾರಬ್ಧಕರ್ಮ. ಇಂತಹ ಹುಚ್ಚ ಗಂಡಂದಿರು ಗಂಟು-ಬಿದ್ದಮೇಲೆ ಮಾಡುವುದೇನು! ಸುಮ್ಮನಾಗು-ಹೀಗೆ ವ್ಯಸನಪಡಬೇಡ.( ಕಣ್ಣೀರು ಒರೆಸುವಳು)

**ಸೌದಾ**:— ಗಯ್ಯಾಳಿಯರೆ, ಕುಚೇಷ್ಟೆಯನ್ನು ಮಾಡುವಿರಾ? (ಹೊಡೆಯುವಳು. ಓಡಿಹೋಗುವರು) ಇವರೆಲ್ಲಿ ಹೋದರು ? (ಒಳಗೆ ಹೋಗಿ ಮೇಘನಾದನನ್ನು ಕಿವಿಹಿಡಿದು ಎಳೆತರುವಳು)

**ಮೋಘಾ:—** ಏ-ಏ-ಏ-ಮೆಲ್ಲಗೆ ಕಿವಿಗಡ್ಡಿ ಕಿತ್ತೀತು !

**ಸೌದಾ:—** ಯಾಕೆ, ನೀವು ಮಾನ ಮರ್ಯಾದೆ ಎಲ್ಲವನ್ನೂ ಬಿಟ್ಟಿರೋ ಹೇಗೆ ?

**ಮೋಘಾ:—** ನನ್ನ ಕಿವಿಗಡ್ಡಿಯನ್ನೇ ಕಿತ್ತಿ, ಮತ್ತೆ ನಾಲಿಗೆಯನ್ನು ಉಪ್ಪ ಮಾಡಿ ಮಾತಾಡುವಿಯಾ !

**ಸೌದಾ:—** ನೀವು ಪತಿಗಳೊ, ನತಿಗಳೋ ? ನಿಮಗೆ ಪುರುಷರೆನ್ನು ವುದಕ್ಕೆ ನನಗೆ ನಾಚಿಕೆಯಾಗುವುದು.

**ಮೋಘಾ:—** ಪ್ರಾಣ ಹೋಗುವ ಪ್ರಸಂಗ ಬಂತೆಂದು ನಾಚಿಕೆಯನ್ನು ಬಿಡಬೇಕಾಯಿತು ; ಮತ್ತೇನು ಮಾಡಲಿ ?

**ಸೌದಾ:—** ಸ್ತ್ರೀಯರಿಗೆ ಪರಿಹಾಸ್ಯ ಮಾಡುತ್ತ ಮಾಡುತ್ತ ಈ ಪುರು ಷರು ಕೊಡ, ತುಂಬಿದ ಬೀದಿಯಲ್ಲಿ ಖತ್ತಲೆ ಕುಣಿಯಹತ್ತಿದರೆ ಮಾಡುವು ದೇನು ?

**ಮೋಘಾ:—** ಕುಣಿಯುವ ರೀತಿಯನ್ನು ಈ ಪುರುಷರಿಗೆ ಕಲಿಸಲಿಕ್ಕೆ ಕಾರಣರು ಸ್ತ್ರೀಯರೇ ಧಿಕ್ಕಾರ ಧಿಕ್ಕಾರವಿರಲಿ ಈ ಸ್ತ್ರೀಯರಿಗೆ !

**ಸೌದಾ:—** ಸ್ವಲ್ಪ ತಡೆಯಿರಿ. ಈ ನಿಮ್ಮ ನಾಚಿಗೆಗೇಡಿತನದ ನಡೆ ವಳಿಕೆಯನ್ನು ಚಿಕ್ಕ ಮಹಾರಾಜರಿಗೆ ತಿಳಿಸಿ ಆಮೇಲೆ ನಿಮಗೆ –

**ಮೋಘಾ:—** ಛೆ, ಛೆ, ದಯವಿಟ್ಟು ಅಷ್ಟು ಮಾತ್ರ ಮಾಡಬೇಡ. ಇಕೋ ನನ್ನಿಂದ ತಪ್ಪಾಯಿತು. ( ಕೆನ್ನೆ ಬಡಿದುಕೊಂಡು ) ನಿನ್ನ ಕಾಲು ಬೀಳುತ್ತೇನೆ. ಹೇಗಾದರೂ ಮಾಡಿ ನಿನ್ನ ಗೆಳತಿಯರ ಬಾಯಿ ಮುಚ್ಚುವಂತೆ ಮಾಡು. (ಕಾಲು ಹಿಡಿಯುವನು )

**ಸೌದಾ:—** ( ನಗುತ್ತ ) ಅವರ ಬಾಯನ್ನು ನಾನು ಮುಚ್ಚುವೆನು ; ಅದರೆ ನನ್ನ ಬಾಯನ್ನು –

**ಮೋಘಾ:—** ನಿನ್ನ ಬಾಯನ್ನು ನಾನು ಮುಚ್ಚುವೆನು.

**ಸೌದಾ:—** ಅದು ಹೇಗೆ ?

**ಮೋಘಾ:—** ಅದು ಹೀಗೆ. (ಮುದ್ದು ಕೊಡುವದಕ್ಕೆ ಹೋಗುವನು) ಪ್ರಿಯೆ–

**ಸೌದಾ:—** ನಡೆಯಿರಿ ಆಚೆಗೆ ! ಸ್ತ್ರೀಯರನ್ನು ನೋಡಿ ಭಯಪಡುವ ನೀವು ರಣಶೂರರೋ ?

**ಮೋಘಾ:—** ಈ ವೀರನು ಸ್ತ್ರೀಯರಿಗೆ ಭಯಪಡುವುದಂತೂ ನಿಜವೆ,

ಆದರೆ ಯುದ್ಧಕ್ಕೂ ಅಂಜುವನು. ನಾನು ಶೃಂಗಾರದ ವೀರನು; ನೀನು ಬಂಗಾರದ ಗಿಣಿಯು!

**ಸೌದಾ** :—ಸ್ತ್ರೀಯರು ನಿಮ್ಮಂಥಹ ಹೇಡಿಗಳಾದ ಹೆಣ್ಣಿಗರ ಪ್ರೇಮವನ್ನು ಬಯಸುವದಿಲ್ಲ. ಪರಾಕ್ರಮಶಾಲಿಗಳನ್ನೇ ಪ್ರಿತಿಸುವರು.

**ಮೇಘ** :—ಹಾಗಲ್ಲ ಪ್ರಿಯೆ, ಸಮಯವನ್ನು ನೋಡಿ ಎಲ್ಲವನ್ನೂ ಮಾಡಬೇಕಾಗುವುದು. ಈ ವಿಷಯವನ್ನು ಹೇಳುವೆನು ಕೇಳು- (ಕಿವಿಯಲ್ಲಿಹೇಳಿ) ನಿತ್ಯ ನಿಯಮದಂತೆ ಯುದ್ಧದ ಸಮಾಚಾರವನ್ನು ಚಿಕ್ಕ ಮಹಾರಾಜರಿಗೆ ತಿಳಿಸುವುದಕ್ಕೆ ಹೊರಟಿದ್ದೆನು.

**ಸೌದಾ** —ಏನು ನಿಜವಾಗಿಯೂ ದ್ರೋಣಾಚಾರ್ಯರು ಚಕ್ರವ್ಯೂಹವನ್ನು ರಚಿಸಿರುವರೇ?

**ಮೇಘ** :—ನಿಶ್ಚಯ. ಮಹಾರಾಜರು ಎಲ್ಲಿರುವರು? ಅವರಿಗೆ ಈ ಸಮಾಚಾರವನ್ನು ಜಾಗ್ರತೆಯಾಗಿ ತಿಳಿಸಬೇಕಾಗಿದೆ. ಚಕ್ರವ್ಯೂಹದ ಹೆಸರು ಕೇಳಿದಾಗಲೇ ನಮ್ಮ ಪ್ರಾಣವಾಯುವು ಹಾರಿ ಹೋಗಿದೆ; ಅದರಮೇಲೆ ಮತ್ತೆ ನಿನ್ನದೊಂದು ಭಯ!

**ಸೌದಾ** :—ಸಾಕು, ಸಾಕು, ಎಲ್ಲವೂ ಗೊತ್ತಾಯಿತು ನಿಮ್ಮ ಬಾಂಡತನ (ಹೋಗಹತ್ತುವಳು)

**ಮೇಘ** :—ಏನೆ, ಏ-ಏ-ಏ-ಆಗಲೇ ನಡೆದ ಪ್ರಕರಣವನ್ನು ಇಲ್ಲಿಯೇ ಮರೆತು ಹೋಗು! ಆಂ?

**ಸೌದಾ** :—ಒಳ್ಳೇದು ಮರೆತೇ ಹೋಗುವೆನು, ಆಯಿತೇ? (ಅಣಗಿಸಿ ಹೋಗುವಳು)

**ಮೇಘ** :—ಬೇಷ್ ದುಸ್ತುಮ ಹೆಂಡತಿ. ಇವಳಿಗನ್ನಬೇಕು—ಪತಿವೃತಾ ಶಿರೋಮಣಿ. ಧಿಕ್ಕಾರ ಧಿಕ್ಕಾರವಿರಲಿ ಈ ಸ್ತ್ರೀಯರಿಗೆ!

(ಹೋಗುವನು)



# ಮೂರನೆಯ ಪ್ರಸಂಗ

(ಉದ್ಯಾನ, ಉತ್ತರೆಯ ಸಖಿಯರು ಪ್ರವೇಶಿಸುವರು)

**ಚಂದ್ರಿಕಾ** :—ಏನೇ ಉತ್ತರಾಮಹಾರಾಣಿಯವರು ಎಲ್ಲಿ ಇರುವರು.

**ಮಲ್ಲಿಕಾ** :—ಈ ಹಾರ ತುರಾಯಿಗಳನ್ನು ಸರಿಯಾದ ಸಮಯಕ್ಕೆ ಅವರಿಗೆ ತಲುಪಿಸಬೇಡವೇ ?

**ವಿಲಾ** :—ಏನೇ ಸೌದಾಮಿನಿ ಉತ್ತರಾಮಹಾರಾಣಿಯವರು ಇದೇ ಉದ್ಯಾನವಲ್ಲಿ ಇರುವರೆಂದು ನೀನೇ ಹೇಳಲಿಲ್ಲವೇ ?

**ಕುಮು** :—ಏನೇ, ಪತಿಯ ದುರ್ಜಿಶೆಯನ್ನು ನೋಡಿ ಅವಳ ಬುದ್ಧಿಯು ಮಂದವಾಗಿ ಹೋಗಿದೆ. ಪಾಪ-ಅವಳಿಗೆ ಎಚ್ಚರವೇ ಇಲ್ಲ !

**ಸೌದಾ** :—ವಾಚಾಳಿ, ಸಾಕುಮಾಡು ಕುಚೇಷ್ಟೆಯನ್ನು. ಅದೋ ನೋಡು ! ರಾಣಿಯವರು ಬಂದರು.

**ಉತ್ತರಾ** :—( ತ್ವರಿತದಿಂದ ಪ್ರವೇಶಿಸಿ ) ಏನೇ ಮಲ್ಲಿಕೆ-ಏನೇ ಚಂದ್ರಿಕೆ ಪ್ರಾಣನಾಥರು ಎಲ್ಲಿ ಇರುವರು?—ಎಲ್ಲಿರುವರು ಹೇಳೆ; ಮಾತಾಡು ಬೇಗನೆ. ಏನೇ ಚಂದ್ರಿಕೆ, ಅವರು ನಿನಗೆ ಭೆಟ್ಟಿಯಾದರೆ ? ಮಲ್ಲಿಕೆ ನೀನು ಅವರನ್ನು ನೋಡಿದಿಯಾ ? ವಿಲಾಸಿನಿ ಅವರು ಎಲ್ಲಿಯಾದರೂ ನಿನ್ನ ಕಣ್ಣಿಗೆ ಬಿದ್ದರೆ ? ಏನೇ, ನೀವು ಹೀಗೇಕೆ ಸುಮ್ಮನೆ ನಿಂತಿರುವಿರಿ ! ಕುಮುದ್ವತಿ ನೀನೆಲ್ಲಿಯಾದರೂ ಅವರನ್ನು ಕಂಡೆಯೇನೆ ?

**ಕುಮು** :—ಓಹೋ ನೋಡಿದೆನು.

**ಉತ್ತರಾ** :—ಎಲ್ಲಿ ನೋಡಿದೆ? ಹೇಳು ಹೇಳು, ಎಲ್ಲಿ ನೋಡಿದೆ ಸವಾರಿಯನ್ನು ?

**ಕುಮು** :— ದೇವಿಯವರೇ ಎಲ್ಲಿಯೂ ಇಲ್ಲ !

**ಉತ್ತರಾ** :—ಸಾಕುಮಾಡು ಅಧಿಕ ಪ್ರಸಂಗವನ್ನು ! ನಡೆಯಿರಿ, ಎಲ್ಲರೂ ಇಲ್ಲಿಂದ–ಹೊರಟು ಹೋಗಿರಿ !

**ಸೌದಾ** :—ಆದರೆ ಈ ಹಾರ ತುರಾಯಿಗಳನ್ನಾದರೂ.........

**ಉತ್ತರಾ** :—ಹಾರವೂ ಬೇಡ, ತುರಾಯಿಯೂ ಬೇಡ. ಯಾರಿಗೋಸುಗ ಈ ಹಾರ ತುರಾಯಿಗಳನ್ನು ಕಟ್ಟಿರುವರೋ, ಅವರೇ ಇಲ್ಲದ ಮೇಲೆ, ಈ ಹಾರ ತುರಾಯಿಗಳು ಏತಕ್ಕೆ ಬೇಕು ? ಬೆಂಕಿ ಹಚ್ಚು ಅವುಗಳಿಗೆ ! ಸೌದಾಮಿನಿ, ಈ ಶೃಂಗಾರವಾದರೂ ಏತಕ್ಕೆ ಬೇಕು ನನಗೆ ?

ರಾಗ ಪೀಲು, ತಾಳ ಧುವಾಳಿ.

ಕಾಣೆ ಪ್ರೀಯ ಪ್ರಾಣಪತಿಯ । ತೋರೆ ಕಾಂತನಾ ಸಖಿಯೇ ॥ ಪಲ್ಲ ॥
ಶಾಂತಿ ಸುಖವ ಕಾಣೆ । ಚಿಂತಿಪೆನಾ ಸ್ವಾಂತದಿ ಭಾಮೇ ।
ದಿವ್ಯ ಚಾರುಚಂದ್ರವದನ ॥ ೧ ॥

ಬಾ, ಬೇಗನೆ ತೆಗೆ ಈ ಒಡವೆಗಳನ್ನು.

**ಸೌದಾ** :—ದೇವಿ, ಹೀಗೆ ದುಡುಕಬೇಡಿ. ಮಹಾರಾಜರ ಸವಾರಿಯು ಇಷ್ಟರಲ್ಲಿಯೇ ಬರಬಹುದು. ಈ ವಡವೆಗಳನ್ನೂ ಈ ಹಾರತುರಾಯಿಗಳನ್ನೂ....

**ಉತ್ತರಾ** :—ಸೌದಾಮಿನಿ, ಈ ಕುಸುಮ ಮಾಲೆಗಳು ಪ್ರಾಣನಾಥರ ಕರಮಾಲೆಗಿಂತಲೂ ಹೆಚ್ಚು ಸಂತೋಷವನ್ನು ಕೊಡುವವೆ ? ಈಪುಷ್ಪಗಳು ಅವರ ಮುಖಕಮಲಕ್ಕಿಂತಲೂ ಹೆಚ್ಚು ಸುಂದರವಾಗಿರುವವೆ? ಈ ಹೂಗಳ ಸುವಾಸನೆಯು ಅವರ ಪ್ರೇಮ ಸಹವಾಸಕ್ಕಿಂತಲೂ ಹೆಚ್ಚು ಅಲ್ಹಾದಕರವಾಗಿವೆಯೇ? ಬೆಳಗಿನಿಂದ ಸ್ವಾಮಿಯ ಮುಖವನ್ನು ಕಾಣದೆ ಜೀವಕ್ಕೆ ಸಮಾಧಾನವೇ ಇಲ್ಲ. ಅವರನ್ನು ಕರೆತರುವುದಕ್ಕೆ ನಿಮ್ಮನ್ನು ಕಳುಹಿಸಿದರೆ, ನೀವೇನು ಮಹಾ ಸೋಮಾರಿಗಳು, ನಿಮ್ಮಿಂದ ಯಾವ ಪ್ರಯೋಜನವೂ ಇಲ್ಲ.

**ಸೌದಾ** :—ಈ ಎರಡು ದಿನಗಳಿಂದ ಮಹಾರಾಜರ ಮನಸ್ಸು ಯುದ್ಧದ ಸಮಾಚಾರವನ್ನು ಕೇಳುವುದರಲ್ಲಿಯೇ ತೊಡಗಿದೆ. ಅದಕ್ಕೋಸುಗ—

**ಉತ್ತರಾ**:— ಬೆಂಕಿ ಹಚ್ಚು ಆ ಯುದ್ಧಕ್ಕೆ! ಯಾವ ಮುಹೂರ್ತಕ್ಕೆ ಪ್ರಾರಂಭವಾಯಿತೋ ಅನಿಷ್ಟವು! ಏನೇ ಇವರಿಗೆ ದಿನಾಲು ಈ ಯುದ್ಧದ ಸಮಾಚಾರವನ್ನು ತಿಳಿಸತಕ್ಕವರಾರು?

**ಸೌದಾ** :—ಎರಡನೆಯವರಾರು? ನಮ್ಮವರೆ.

**ಉತ್ತರಾ** :—ಯಾರು ! ಮೇಘನಾದನೇ ?

**ಸೌದಾ** :—ಮಹಾರಾಜರು ಅವರನ್ನು ಅದೇ ಕೆಲಸಕ್ಕಾಗಿ ನೇಮಿಸಿರುವರು.

**ವಿಲಾ** :—ಸೌದಾಮಿನಿ, ಆಗಲೇ ನಡೆದ ಚಮತ್ಕಾರವನ್ನು ತಿಳಿಸಲೇನು ದೇವಿಯವರಿಗೆ?

**ಸೌದಾ**:—ಉಶ್, ಸುಮ್ಮನೇ ಇರು. ಮುಚ್ಚು ಬಾಯಿ, ಕೊಟ್ಟೇನು ಒಂದು ಕೆನ್ನೆಗೆ.

**ಉತ್ತರಾ** .—ಸೌದಾಮಿನಿ, ನೀನು ಮೇಘನಾದನಿಗೆ ಒಳ್ಳೇ ಶೋಭಾನ ವೆಂದು ಹೇಳು. ಯುದ್ಧದ ಸಮಾಚಾರವನ್ನು ತಿಳಿಸಿ ನವಾರಿಯ ಮನಸ್ಸನ್ನು ವ್ಯಥೆಪಡಿಸಿದರೆ ಅದು ನನಗೆ ಸಹಿಸದು. ಏನೇ ನಾನು ನಿಮಗೆ ಹೋಗುವು ದಕ್ಕೆ ಹೇಳಲಿಲ್ಲವೆ ? ಸುಮ್ಮನೆ ಏಕೆ ನಿಂತಿರುವಿರಿ, ಬುಬ್ಬುಣಚಾರ ಹೇಳುತ್ತ- ನಡೆಯಿರಿ ಆಚೆಗೆ.

(ಅಭಿಮನ್ಯು ಪ್ರವೇಶಿಸುವನು)

**ವಿಲಾ** .—ದೇವಿಯವರೇ, ದೇವಿಯವರೇ....

**ಉತ್ತರಾ** :—ನಡೆ ಸುಮ್ಮನೆ, ನನ್ನ ತಲೆ ಕೆಡಿಸಬೇಡ.

**ವಿಲಾಸಿನಿ**:—ಅದೋ ನೋಡಿ ಚಂದ್ರೋದಯವಾಯಿತು.(ಅಭಿಮನ್ಯು ಮಾತಾಡಬೇಡಿರೆಂದು ಸನ್ನೆ ಮಾಡುವನು) ದೇವಿಯವರೇ,

**ಚಂದ್ರಿಕೆ** :—ಏನೆ, ಮಹಾರಾಣಿಯವರು ಕೋಪಗೊಂಡಂತೆ ಕಾಣುವುದಿಲ್ಲವೇ ?

**ಸೌದಾ** :—ಕೋಪಿಸಿರುವರೋ ಛೆ, ಇನ್ನುಮೇಲೆ ನಾವು ಇಲ್ಲಿಂದ ಹೋಗದಿದ್ದರೆ ಮಾತ್ರ, ದೇವಿಯವರು ನಿಜವಾಗಿಯೂ ಕೋಪಿಸುವರು. ನಡೆಯಿರಿ ಹೋಗೋಣ ದೇವಿಯವರೆ, ಅದೊ ನೋಡಿ. (ಉತ್ತರೆಯು ಅಭಿಮನ್ಯುವನ್ನು ನೋಡಿ ನಾಚುವಳು)

(ಸಖಿಯರೆಲ್ಲ ತೆರಳುವರು)

**ಉತ್ತರಾ** :—ನಾಥಾ, ನಾಥಾ, (ಅಭಿಮನ್ಯು ಅಡಗುವನು) ಹಾ, ಎಲ್ಲಿ ಹೋದರು ಇಷ್ಟರಲ್ಲಿಯೆ ? ಈ ಕಡೆ ನಾನು ಅವರನ್ನು ನೋಡಿದೆ; ಕಣ್ಣಿಗೆ ಕಣ್ಣು ಭೆಟ್ಟಿಯಾಯಿತು; ಆದರೆ ನವಾರಿಯು ಎಲ್ಲಿ ಮರೆಯಾಯಿತು ? ಅಥವಾ ನನಗೇ ಭ್ರಾಂತಿಯೋ ಇನ್ನು ಎಲ್ಲಿ ಶೋಧಿಸಲಿ ? (ಆಚೆಗೆ ಈಚೆಗೆ ಹುಡುಕುವಳು) ಇದೋ ಇಂತಹ ಕಣ್ಣು ಮುಚ್ಚಾಲೆಯ ಆಟವು ನನಗೆ ಸಹಿಸದು. ತಿಳಿಯಿತೇ ! ಈ ಕಣ್ಣು ಕಟ್ಟಿನ ವಿದ್ಯೆಯನ್ನು ನನ್ನೆದುರಿಗೆ ತೋರಿಸಬೇಡಿ. ನಾಥಾ, ನನ್ನನ್ನು ಹೀಗೆ ಪೀಡಿಸಿದರೆ ನಾನು ತಮ್ಮ ಜೊತೆಗೆ ಮಾತಾಡಲಿಕ್ಕಿಲ್ಲ, ನನಗೆ ಕೋಪ ಬಂದೀತು. ನಾನು ಮಾತಾಡು ವುದು ವಿನೋದವಲ್ಲ; ನತ್ಯವಾಗಿಯೂ ಹೇಳುತ್ತೇನೆ ! ಏಕೆ ಮಾತಾಡುವು ದಿಲ್ಲವೆ ? ನಾಥಾ, ತಮ್ಮ ಮುಖ ಚಂದ್ರನನ್ನು ತೋರಿಸಿ, ಈ ದೀನ ದಾಸಿ

ಯನ್ನು ಧನ್ಯಗೊಳಿಸಿರಿ. (ಬೇಸರಿಕೆ ಬಂದು ಒಂದೆಡೆಗೆ ಕೂಡುವಳು. ಅಭಿಮನ್ಯು ಬಂದು ಅವಳ ಕಣ್ಣು ಮುಚ್ಚುವನು) ಯಾರು ಯಾರದು ? ತಾವೇ; ನನಗೆ ಗುರುತು ಸಿಕ್ಕಿತು. ಏಕೆ ಇನ್ನು ಮೇಲಾದರೂ—ಕಣ್ಣು ಮುಚ್ಚಿದ ಕೈ ತೆಗೆಯುವುದಿಲ್ಲವೆ ? ಸಾಕಾಯಿತಮ್ಮಾ ನನಗೆ– ಎಷ್ಟು ಚೇಷ್ಟೆಯಿದು ? ಸಿಕ್ಕಿತು, ನನಗೆ ಗುರುತುಸಿಕ್ಕಿತು ಯಾರು ಹೇಳಲೆ ? ನೀವು-ನೀವು. (ಅಭಿಮನ್ಯು ಕೈ ತೆಗೆಯುವನು) ಮುಖದಿಂದ ಹೆಸರನ್ನು ಹೇಗೆ ಉಚ್ಚರಿಸ ಬೇಕಮ್ಮಾ ?

**ಅಭಿಮನ್ಯು** :—ಹೆಸರು ಉಚ್ಚರಿಸದಿದ್ದರೆ, ಅದನ್ನು ಸಮೂಲವಾಗಿ ಬಿಸಾಡಿಬಿಡುವಿಯೋ ಏನು !

**ಉತ್ತರಾ** :—ಸಾಕು, ಸಾಕು. ತಮಗೆ ಬರುವುದಕ್ಕೆ ಈಗ ಸಮಯ ದೊರೆಯಿತೇ ?

**ಅಭಿಮನ್ಯು** :—ಈಗಲ್ಲ–ಆಗಲೇ ! ನೀನು ನಿನ್ನ ಗೆಳತಿಯರನ್ನು ಪೀಡಿಸುತ್ತಿದ್ದೆಯಲ್ಲ, ಆಗಲೆ. ಉತ್ತರೆ ನನ್ನ ಮುದ್ದುಗಿಳಿಯೇ, ಈ ನಿನ್ನ ಹುಡುಗಾಟದ ಸ್ವಭಾವವು ಎಂದಿಗೆ ಹೋಗುವದು ? ಇನ್ನುಮೇಲೆ ಅದು ನಿನಗೆ ಒಪ್ಪುವುದಿಲ್ಲ.

**ಉತ್ತರಾ** :—ಸಾಕು ಸಾಕು, ಈ ವೇದಾಂತವು. ಈ ಬಡದಾಸಿಯನ್ನು ಪೀಡಿಸುವುದು ತಮಗಾದರೂ ಶೋಭಿಸುವುದೇ ?

**ಅಭಿಮನ್ಯು** :—ಪ್ರಿಯೆ, ನಾನೇನು ಪೀಡಿಸಿದೆ ?

**ಉತ್ತರಾ** :—ನಡೆಯಿರಿ, ನನ್ನ ಜೊತೆಗೆ ಮಾತಾಡಬೇಡಿರಿ.

**ಅಭಿಮನ್ಯು** :—ಓಹೋ ಇದೇನು ನಮಗೆ ಪ್ರಾಯಶ್ಚಿತ್ತವೇ ? ಕೋಪಿಸು ಚೆನ್ನಾಗಿ ಕೋಪಿಸು. ಕೋಪದ ಹಿಂದೆ ಅನುರಾಗವು ಸಿದ್ಧ ವಾಗಿಯೇ ಇದೆ ಎಷ್ಟು ಹೊತ್ತು ಈ ಪ್ರಣಯ ಕೋಪವು ? ನನ್ನ ಮುದ್ದು ಚಿನ್ನವೆ, ಒಂದು ನವಿಮಾತು, ಒಂದು ಸಲ ಪ್ರೀತಿಯ ನೋಟ (ಕೆನ್ನೆಗೆ ಕೈ ಹಚ್ಚುವನು) ಅಯ್ಯೋ ಪಾಪ ! ಕೆನ್ನೆಗಳು ಉಬ್ಬಿಹೋಗಿವೆ !

**ಉತ್ತರಾ** :—ಎಚ್ಚರ, ನನ್ನ ಮೈ ಮುಟ್ಟದಿರೆಂದರೆ....

**ಅಭಿಮನ್ಯು** :—ಮೈ ಮುಟ್ಟಲಿಲ್ಲ ! ಗಲ್ಲವನ್ನು ಹಿಡಿದೆ. ಆದರೆ ನಮಗೂ ಸೆಡವು ಮಾಡಲಿಕ್ಕೆ ಬರುವುದು. ಯಾಕೆ ಈಗ ನಗುವಿಯೋ ಅಥವಾ ನಾನು ಕೋಪಿಸಲೊ ? ಅಕಾ ನೋಡು ನಗೆಯು ಬಂತು.

ಪ್ರಾರಂಭವಾಯಿತು, ನಕ್ಕಳು ನಕ್ಕಳು ! ಪಾಪ ಹೊರಗೆ ಬರಲು ಹಾತೊರೆ ಯುವ ಆ ಹಾಸ್ಯ ಚಂದ್ರಿಕೆಯನ್ನು ಸುಮ್ಮನೆ ಏತಕ್ಕೆ ತಡೆದುಹಾಕುತ್ತೀ ? ಹೂ ನಗು, ನಗು. (ಉತ್ತರೆಯು ನಗುವಳು)

**ಉತ್ತರಾ** :—ನಾನು ಮಾತಾಡುವುದೂ ಇಲ್ಲ. ಮತ್ತೆ ನಗುವುದೂ ಇಲ್ಲ.

**ಅಭಿಮನ್ಯು** :—ಸರಿ ಹಾಗಾದರೆ, ನೀನೂ ಕೋಪಿಸು, ನಾನೂ ಕೋಪಿಸುವೆನು. (ಮುಖ ತಿರುಗಿಸಿ ನಿಲ್ಲುವನು)

**ಉತ್ತರಾ** :—ಬೇಷ್ ಬೇಷ್ ನಗುವುದಕ್ಕೂ ತಡವಿಲ್ಲ, ಕೋಪಿಸುವು ದಕ್ಕೂ ತಡವಿಲ್ಲ. ಒಳ್ಳೇ ವಿದ್ಯೆ ಸಾಧಿಸಿದೆ. ನಿಜವಾಗಿಯೂ ಕೋಪಬಂತೆ?.... ಯಾಕೆ ಮಾತಾಡುವುದಿಲ್ಲವೆ ?

**ಅಭಿಮನ್ಯು** :—ಉ ಹೂ ನಾನು ಮಾತಾಡುವುದಿಲ್ಲ ಒಂದು ಸಲ ಹೇಳಿದೆನಲ್ಲವೆ, ನಾನು ನಿಜವಾಗಿಯೂ ಕೋಪಿಸಿರುವೆನು.

**ಉತ್ತರಾ** :—(ಶೃಂಗಾರದಿಂದ) ಅಮ್ಮಯ್ಯಾ ಹಾಗಾದರೆ ಇದು ಸುಳ್ಳು ಕೋಪವಲ್ಲ !....ಹೀಗೆ ಕೋಪಿಸುವುದಾದರೆ ಇಲ್ಲಿಗೆ ಏತಕ್ಕೆ ಬರೋಣ ವಾಯಿತು ? ಏಕೆ ಮಾತಾಡುವುದಿಲ್ಲವೇ ?

ರಾಗ ನಾಟಕುರಂಜಿ, ತಾಳ ರೂಪಕ

**ಪ್ರಾಣೇಶನೆ ಮಾತನಾಡಿಸೊ** । ಪ್ರಿಯಕಾಂತೆಯೂ ॥ ಪಲ್ಲ ॥
ಪ್ರಣಯ ಸಮಯವಿದುವೆ । ಮುನಿಯುವುದಿದು ತರವೇ ।
ಮೌನವ ಬಿಡು ರಮಣಾ । ಸನ್ನುತಾಂಗನೇ ವಿನೋದ ॥
ವಿನ್ನು ಸಾಕು ಸಹಿಸಲಾರೆ ॥ ೧ ॥

**ಅಭಿಮನ್ಯು** :—ಪುನಃ ಹೇಳುತ್ತೇನೆ ನಾನು ಮಾತಾಡುವುದಿಲ್ಲ ಎಲಾ ಮಾತಾಡುತ್ತ ಮಾತಾಡುತ್ತ ನಮ್ಮ ಪ್ರತಿಜ್ಞೆಯೇ ಭಂಗವಾಗುವುದಲ್ಲ !

**ಉತ್ತರಾ** :—ಎಲ್ಲಿ ? ನೋಡೋಣ ! ಇದೇ ಏನು ನಿಮ್ಮ ಕೋಪ. ಛೀ ನಿಮಗೆ ಚೆನ್ನಾಗಿ ಬರುವುದಿಲ್ಲ. ಇದು ಭಂಡಾಚಾರದ ಕೋಪ.

**ಅಭಿಮನ್ಯು** :—ಹೌದು ಪ್ರಿಯೆ, ಸ್ತ್ರೀಯರ ಹಾಗೆ ಠಕ್ಕುತನದ ವಿದ್ಯೆಯು ಪುರುಷರಿಗೆ ಸಾಧಿಸುವುದಿಲ್ಲ.

**ಉತ್ತರಾ** :—ಪ್ರಿಯೆ, ಪ್ರಿಯೆ ಎಂದು ಇಲ್ಲಿ ಬಂದಾಗ್ಗೆ ಮಾತ್ರವೇ ಪ್ರೀತಿ. ಹೊರಟು ಹೋದ ಮೇಲೆ, ಎರಡೆರಡು ದಿವಸ ದರ್ಶನವೇ ಇಲ್ಲ. ಪುರುಷರ ಈ ಬಗೆಯ ಪ್ರೀತಿಯು ಸ್ತ್ರೀಯರಿಗೆ ತಲೆಭಾರವೆನಿಸುವುದು.

**ಅಭಿಮನ್ಯು** :—ಮತ್ತೆ, ತಲೆಭಾರವಾದ ಸ್ತ್ರೀಯರ ಪ್ರೇಮವು ಕೂಡಾ ಪುರುಷರಿಗೆ ಕೊಂಚ ಜಡವಾಗಿಯೇ ಪರಿಣಮಿಸುವುದು.

**ಉತ್ತರಾ** :—ಸುಮ್ಮನೆ ಏಕೆ ಸ್ತ್ರೀಯರಮೇಲೆ ಪುರುಷರದಿಷ್ಟೊಂದು ಕಟಾಕ್ಷ !

**ಅಭಿಮನ್ಯು** :—ಅದಕ್ಕೆ ಕಾರಣವು ನಿಮ್ಮಂತಹ ತರುಣಿಯರ ಚಂಚಲ ವಾದ ನೋಟ. ನೇತ್ರ ಕಟಾಕ್ಷದಿಂದ, ತೋರಿಸುವ ಅಭಿನಯಕ್ಕೆ ಪುರುಷನು ಜರ್ಜರನಾಗಿ ಹೋಗುವನು !

**ಉತ್ತರಾ** :—ಆದರೆ ನಮ್ಮೊಡನೆ ನಿಮಗೆ ಇಷ್ಟೇಕೆ ವೈರಭಾವ ?

**ಅಭಿಮನ್ಯು** :—ಅದಕ್ಕೆ ಕಾರಣವು ನಿಮ್ಮ ಚಂಚಲವಾದ ಸ್ವಭಾವ.

**ಉತ್ತರಾ** :—ಎಲ್ಲವೂ ಗೊತ್ತಿದೆ. ಪುರುಷರಿಗೆ ಯಾವಾಗಲೂ ಬಹಳ ದುಡುಕು.

**ಅಭಿಮನ್ಯು**: —ಮತ್ತೆ ಸ್ತ್ರೀಯರೇನು ಬರೀ ಥಳಕು.

**ಉತ್ತರಾ** :—ಸಾಕಾಯಿತು ನನಗೆ ಈ ಶುಷ್ಕವಾದವು.

**ಅಭಿಮನ್ಯು** :—ಹಾಗಾದರೆ ಇನ್ನು ಮೇಲೆ ರಸಭರಿತವಾದ ಮುದ್ದಿನ ಸಂವಾದವನ್ನು ಪ್ರಾರಂಭಿಸೋಣ. ಪ್ರೀಯೆ ಇಂತಹ ಕಲಹದಿಂದ ಪ್ರೇಮ ಪ್ರಸಾದವು ಬಹು ರುಚಿಕರವೆನಿಸುವುದು. ಕಲಹದ ಪ್ರೇಮವು ದುಃಖಕ್ಕೆ ಕಾರಣವು; ಆದರೆ ಪ್ರೇಮದ ಕಲಹವು ಸುಖಕ್ಕೆ ಸಾಧನವು.

ರಾಗ ಭೀಮಪಲಾಸ, ತಾಳ ತ್ರಿವಟ

ಪ್ರೇಮಕಲಹವಿದುವೆ । ಕಾಂತೆ ।
ಕಾಮೋತ್ಸವ ಶೃಂಗಾರಕೆ ರುಚಿಯೆ　　॥ ಪಲ್ಲ ॥
ಚಾರುರಮಣಿಯ ಪ್ರಣಯಕೋಪ ।
ಸಾರ ಸೌಖ್ಯದ ಕಾರಣವಿದುವೇ ॥

ಪ್ರೇಮಕಲಹದ ಪುಷ್ಪಾಂಜಲಿಯಲ್ಲಿ ಶೃಂಗಾರದ ಸುಗಂಧವು ಬಹು ಮನೋಹರವೆನಿಸುವುದು. ಬಾ, ಹೀಗೆ ಬಾ, ನನಗೆ ಒಮ್ಮೆ ಸೊಗಸಾಗಿ ಆಲಿಂಗನವನ್ನು ಕೊಡು; ಮತ್ತೆ ಮಧುರವಾದ ಅಧರಾಮೃತವನ್ನು ನೀಡು.

(ಅಭಿಮನ್ಯುವು ಉತ್ತರೆಯನ್ನು ತನ್ನ ಹತ್ತಿರ ಸೆಳೆಯುವನು. ಉತ್ತರೆಯು ಭಯ ದಿಂದ ಹಿಂದಕ್ಕೆ ಸರಿಯುವಳು.)

**ಉತ್ತರಾ**:—ನಾನೊಲ್ಲೆ, ಪ್ರಿಯಾ, ಈ ಖಡ್ಗದಿಂದ ನನಗೆ ಬಹಳ ಭಯ ವೆನಿಸುವುದು. ಇಳ ತಾಸೂ ಇದೇತಕ್ಕೆ ಬೇಕು, ತಮ್ಮ ಬಳಿಯಲ್ಲಿ ?

**ಅಭಿಮನ್ಯು** .—ನಿಜವು; ನಿನ್ನ ಮಂದಿರದಲ್ಲಿ ಈ ಕತ್ತಿಯು ನಿನಗೆ ಸವತಿಯಂತೆ ಕಾಣುತ್ತಿರಬಹುದಲ್ಲವೇ ?

**ಉತ್ತರಾ** :—ಅಹುದು ನಾಥಾ, ಈ ಸವತಿಯು ಒಂದಾನೊಂದು ದಿವಸ ನಮ್ಮೀರ್ವರ ಪ್ರೇಮವನ್ನು ಎಲ್ಲಿ ಭಂಗಿಸುವಳೋ ಏನೋ ಎಂದು, ನನಗೆ ಭಯವೆನಿಸುವುದು. ಈ ಕತ್ತಿಗೆ ಆಧೀನರಾದ ಜೀವಿಗಳು ಪ್ರೇಮದ ಪಾಶವನ್ನು ಹರಿದು ಬೀಸಾಡುವರಂತೆ ! ಪ್ರಾಣೇಶ್ವರಾ, ಈ ಸವತಿಯ ಸಹಾಯದಿಂದ ನನ್ನನ್ನು ಬೇರೆ, ದೂರುಗೊಳಿಸುವಷ್ಟು ತಮ್ಮ ಮನಸ್ಸು ಕಠಿಣವಾಗಲಿಕ್ಕಿಲ್ಲವಷ್ಟೇ ? ನನಗಂತೂ ಈ ಸವತಿಯನ್ನು ನೋಡಿದರೆ ಯೋಚನೆಯಾಗುವುದು.

**ಅಭಿಮನ್ಯು** .—ಪ್ರಿಯೆ, ಎಂತಹ ಹುಚ್ಚಿ ನೀನು. ನೀನು ನನ್ನ ಸಂಸಾರ ಕ್ಷೇತ್ರದ ಪ್ರೇಮ ದೇವತೆಯು, ಮತ್ತು ಈ ಖಡ್ಗವು ನನ್ನ ಮಂಗಲ ಕರವಾದ ರಣದೇವತೆಯು ! ಇದಕ್ಕೆ ನೀನು ಭಯಪಡುವೆಯಾ ? ನೋಡು ಒರೆಯ ಮಂದಿರದಲ್ಲಿ ವಿಶ್ರಾಂತಿಯನ್ನು ಹೊಂದುತ್ತ ಹೇಗೆ ಗಂಭೀರವಾಗಿ ಬಿದ್ದುಕೊಂಡಿದೆ ! (ಹೊರಗೆ ತೆಗೆದು) ಶತ್ರುಗಳ ಬಿಸಿಬಿಸಿಯಾದ ರಕ್ತದಿಂದ ಇದರ ತೃಷೆಯನ್ನು ನೀಗಿಸಲೇ ಬೇಕು. ವೈರಿಗಳ ನೆತ್ತರದ ಬಣ್ಣದಿಂದ ಇದರ ಶಂಗಾರ ವಿಲಾಸವ ಮೊಗ್ಗೆಯನ್ನು ಅರಳಿಸಬೇಕು; ನೋಡು, ಎಷ್ಟು ತೇಜಸ್ವಿಯಾಗಿದೆ.

**ಉತ್ತರಾ** :—ಬೇಡ, ಬೇಡ. ನನಗೆ ಈ ನಾಗಿಣಿಯ ದರ್ಶನವೇ ಬೇಡ. ನಾಥಾ ನನ್ನ ಮುಂದೆ ಇದರ ಹೆಚ್ಚಳವನ್ನು ವರ್ಣಿಸಬೇಡಿರಿ. ಅದನ್ನು ಮೊದಲು ದೂರಿಡಿರಿ.

**ಅಭಿಮನ್ಯು** :—ನಿಜವಾಗಿಯೂ ಸ್ತ್ರೀ ಜಾತಿಯು ಮಹಾ ಮತ್ಸರಿಯು ಇಕೋ (ಕತ್ತಿಯನ್ನು ಎಸೆದು) ನೋಡು, ಈ ನನ್ನ ಪ್ರೇಮದೇವತೆಗೋಸುಗ ಈ ನನ್ನ ಕರ್ತವ್ಯದ ಕಠೋರ ದೇವತೆಯನ್ನು, ನಾನೊಂದರಕ್ಷಣ ದೂರವಾಗಿ ರಿಸುವೆನು. ಈಗ ನಿನಗೆ ಸಮಾಧಾನವಾಯಿತೋ ?—

**ಉತ್ತರಾ**.—ಮತ್ತು ಈ ಭೀಕರವಾದ ವೀರಾವೇಶದ ಉಡುವು ತೆಗೆದುಹಾಕಿರಿ. ಅದು ನನಗೆ ಚನ್ನಾಗಿ ಕಾಣುವುದಿಲ್ಲ.

**ಅಭಿಮನ್ಯು** :—ಅಂದರೆ ನಿನ್ನ ಅಭಿಪ್ರಾಯವಾದರೂ ಏನು ?

**ಉತ್ತರಾ** :—ಈ ಪ್ರಣಯ ವೀರರನ್ನು ಈ ದಿವಸ ನಾನು-ಪುಷ್ಪವೇಷ ದಿಂದ ಅಲಂಕರಿಸಬೇಕಾಗಿದೆ. ಮತ್ತೆ....

**ಅಭಿಮನ್ಯು** :—ಮತ್ತೇನು ನನ್ನನ್ನು ಪ್ರಣಯದ ಮಂಜುಳವಾದ ಗಾಯನ ನೃತ್ಯವನ್ನು ಮಾಡಲಿಕ್ಕೆ ಹಚ್ಚುವಿಯೋ ಏನು ?

**ಉತ್ತರಾ**ಃ—ಹೌದು, ನಿಶ್ಚಯವಾಗಿ ಹಾಗೆಯೇ ಮಾಡುವೆನು.

**ಅಭಿಮನ್ಯು**:—ಸ್ತ್ರೀಯರು ಪುರುಷರನ್ನು ಕಡೆಗಣ್ಣಿನ ತಾಳಗತ್ತಿನ ಮೇಲೆ ಕುಣಿಸುವುದೇನೋ ನಿಜ, ಆದರೆ ಅದಕ್ಕೇನಾದರೂ ಸ್ವಲ್ಪ ಮರ್ಯಾದೆಯು ಬೇಕಲ್ಲವೇ ?

**ಉತ್ತರಾ**ಃ—ಏಕಾಂತದಲ್ಲಿ ಕೂಡ ಸ್ತ್ರೀಯರು ಮರ್ಯಾದೆಯ ಮುಸು ಕಿಟ್ಟುಕೊಂಡಿರಬೇಕೆ ? ಚೆನ್ನಾಗಿದೆ ! ಅದೇನೂ ಇಲ್ಲ; ಈ ದಿವಸ ತಾವು ನನ್ನ ಅಪೇಕ್ಷೆಯನ್ನು ಪೂರ್ಣಗೊಳಿಸಲೇಬೇಕು.

**ಅಭಿಮನ್ಯು**ಃ—ಛೇ ಇದೇನು, ನಾನು ನಿನ್ನ ಮನಸ್ಸಿನಂತೆ ಕುಣಿ ಯಲೀ ಹೇಗೆ ?

**ಉತ್ತರಾ**ಃ—ನಾನೂ ನಿಮ್ಮ ಜೊತೆಗೆ ಕುಣಿಯುವೆನು. ಮಿಂಚು ಕುಣಿಯಲಿಕ್ಕೆ ಪ್ರಾರಂಭಿಸಿದ ಕೂಡಲೆ ಆಕಾಶದ ಅಂಗಣದಲ್ಲಿ ಮೇಘಗಳು ಸಹ ಉಲ್ಲಾಸದಿಂದ ಗರ್ಜನೆ ಮಾಡುತ್ತ ಕುಣಿಯಲಿಕ್ಕೆ ಪ್ರಾರಂಭಿಸುತ್ತವೆ.

**ಅಭಿಮನ್ಯು**ಃ—ಕೊನೆಗೆ ಪಶ್ಚಾತ್ತಾಪದಿಂದ ಮಳೆಯು ಕಣ್ಣೀರು ಸುರಿಸುತ್ತದೆ. ಅದರಂತೆ ನಾನೂ ಕಣ್ಣೀರಿನ ಮಳೆಯನ್ನು—

**ಉತ್ತರಾ**ಃ—ಇದೇನು ಶೃಂಗಾರ ಸಮಯದಲ್ಲಿ ಹಾಳು ಮಾತು

**ಅಭಿಮನ್ಯು**ಃ—ಹಾಗಾದರೆ ನೀನು ಮಾಡುವುದು ಒಳ್ಳೇ ರೀತಿಯೇ ? ಸ್ವತಃ ಕುಣಿದು ಮತ್ತೊಬ್ಬರನ್ನು ಕುಣಿಸುವಂತಹ ಕಲೆಯನ್ನಾದರೂ ನೀನು ಎಲ್ಲಿ ಕಲಿತೆ ?

**ಉತ್ತರಾ**ಃ—ಎಲ್ಲಿ ಅಂದರೆ ನಮ್ಮ ತಂದೆಯವರ ಸಂಗೀತ ಶಾಲೆಯಲ್ಲಿ.

**ಅಭಿಮನ್ಯು**ಃ—ಓಹೋ, ವಿರಾಟರಾಜನ ಈ ಪ್ರೀತಿಯ ಕನ್ಯಾರತ್ನವು ಅಲ್ಲಿ ರಂಗ ದೇವತೆಯಾದದ್ದನ್ನು ನಾನು ಮರೆತೇ ಬಿಟ್ಟಿದ್ದೆನು.

ಉತ್ತರಾ:—ಅಲ್ಲಿಯೇ ನನಗೆ ಮಾವನವರು ಗಾಯನ ನರ್ತನವನ್ನು ಕಲಿಸಿದರು

ಅಭಿಮನ್ಯು:—ಏನು ಯಾರು, ನಮ್ಮ ತಂದೆಯವರೆ ?

ಉತ್ತರಾ:—ಅಹುದು, ಆ ಕಾಲಕ್ಕೆ ಅಜ್ಞಾತವಾಸದಲ್ಲಿ, ಅವರು ಬೃಹನ್ನಳೆಯಾಗಿ ನಮ್ಮ ಮನೆಯಲ್ಲಿಯೇ ವಾಸವಾಗಿದ್ದರು. ನಿಜವಲ್ಲವೇ ?

ಅಭಿಮನ್ಯು:—ಹೌದು, ನಿಜವು. ಈ ವಿದ್ಯೆಯನ್ನು ನಿನಗೆ ನಮ್ಮ ತಂದೆಯವರು ಕಲಿಸಿದರೆಂದು. ಅದನ್ನು ನೀನು ನನಗೆ ಕಲಿಸತಕ್ಕವಳೇನು ?

ಉತ್ತರಾ:—ಅಹುದು. ಮಾವನವರ ಮೈಯಲ್ಲಿಯ ಯಾವತ್ತೂ ಗುಣಗಳು ತಮ್ಮಲ್ಲಿವೆ ಇದೊಂದು ಗುಣವಿಲ್ಲ-ಅದನ್ನು ನಾನು ತಮಗೆ ಕಲಿಸುತ್ತೇನೆ.

ಅಭಿಮನ್ಯು:—ಉತ್ತರೆ, ನೀನು ಬಹು ಚತುರೆಯು. ಈ ಯುಕ್ತಿವಾದದಿಂದ ನನ್ನನ್ನು ಮಾತಾಡದಂತೆ ಮಾಡಿದೆ.

ಉತ್ತರಾ:—ಹಾಗಾದರೆ ಏಳಿ, ಪುಷ್ಪದ ಉಡುಪು ತೊಡಿಸುತ್ತೇನೆ. ಏನೆ ಮಲ್ಲಿಕೆ, ಚಂದ್ರಿಕೆ (ಅಭಿಮನ್ಯು ಉತ್ತರಾ ಹೋಗುವರು ದಾಸಿಯರು ಬರುವರು.)

ಚಂದ್ರಿಕೆ:—ಅಮ್ಮಯ್ಯ, ಅದೋ ರಾಣಿಯವರು ಮಹಾರಾಜರಿಗೆ ಸ್ವತಃ ತಾವೇ ಪುಷ್ಪವೇಷವನ್ನು ತೊಡಿಸುತ್ತಿರುವರು.

ಮಲ್ಲಿಕಾ:—ಮತ್ತು ಆ ವೇಷವನ್ನಾದರೂ ಬಹು ಪರಿಶ್ರಮದಿಂದ ರಾಣಿಯವರೇ ಸಿದ್ಧಪಡಿಸಿರುವರು.

ಚಂದ್ರಿಕೆ:—ಅಹಹ ! ಮಹಾರಾಜರಿಗೆ ಪುಷ್ಪವೇಷವು ಎಷ್ಟು ಸುಂದರವಾಗಿ ಒಪ್ಪುವುದು !

ಮಲ್ಲಿಕಾ:—ಮೂರ್ತಿಮಂತ ಮದನರಾಜನೆ ! ಅಮ್ಮಯ್ಯ ಉಭಯತರು ಇತ್ತಲೇ ಬರುತ್ತಿರುವರು.

ರಾಗ ಖಮಾಜ್, ಆದಿತಾಳ

ಭೂತಲಕೀಗಾ । ಮದನನಿಳಿದನೇ । ಅತಿ ಸಡಗರದಲಿ । ಬರುವನು ।
ತಾನೇ ॥ ಪಲ್ಲ ॥ ಕುಸುಮದ ಸುಮಾಲೆಯಾ । ತೋಷಾತುರದಲಿ ।
ಕರದೊಳು ಧರಿಸಿ । ಶಶಿವದನೆಯರಸು । ಮರುಳುಗೊಳಿಸುತಾ ॥ ೧ ॥

( ದಾಸಿಯರು ಹೋಗುವರು. ಕೈಯಲ್ಲಿ ಪುಷ್ಪಧನುರ್ಬಾಣಗಳನ್ನು ಹಿಡಿದು ಸಂಧಾನ ಮಾಡುತ್ತಾ ಅಭಿಮನ್ಯು ಪ್ರವೇಶಿಸುವನು; ಉತ್ತರೆಯು ಭಯ ಪಟ್ಟಂತೆ ಆವಿರ್ಭಾವ ತೋರುವಳು )

**ಉತ್ತರಾ**:-ಆಹಾ ಪ್ರತ್ಯಕ್ಷಮದನನ ಪ್ರೀತಿಯ ಬಾಣವೆ, ಪ್ರಿಯಕರಾ, ಈ ಶರಘಾತವನ್ನು ಕೋಮಲಾಂಗನೆಯಾದ ನಾನು ಸಹಿಸುವುದು ಸಾಧ್ಯವೇ?

ರಾಗ ಗಾರಾ ತಾಳ: ಧುಮಾಳಿ

ಸಹಿಸೆ ನಾ ಕುಸುಮಶರಘಾತವಾ ।
ಬಹುಪರಿ ಪ್ರಣಯದ ಸರಸಸಾಕು ॥ ಪಲ್ಲ ॥
ಪ್ರಹರಣತಗಲಿಸಿ ನವಯುವತಿಯನತಿ ॥ ಶ್ರಮಪಡಿಸುವೆ । ॥ಅ. ಪ॥
ಚಾರುವೀರರತಿ ಶೃಂಗಾರ । ಸೂರೆಗೊಳಿಸಿ ಪ್ರೇಮದಿ ಚತುರಾ ।
ಅರಸಿಯ ಸುಮನವ ಮರುಳುಗೊಳಿಸಿ । ॥ ೧ ॥

ತಡೆಯಿರಿ; ತಡೆಯಿರಿ, ಈ ಪ್ರೀತಿಯ ಶರಸಂಧಾನವನ್ನು ನಿಲ್ಲಿಸಿ, ಕೆಲಹೊತ್ತು ಸ್ವಸ್ಥರಾಗಿ ನಿಂತುಕೊಳ್ಳಿರಿ; ಎಂದರೆ ನಾನು ಈ ಮದನ ಮೂರುತಿಯನ್ನು ನನ್ನ ಕಣ್ಣಲ್ಲಿ ಬಚ್ಚಿಟ್ಟುಕೊಳ್ಳುವೆನು. ಡಾ ಸ್ವಲ್ಪ ಕೂಡ ಅಲಿದಾಡಕೂಡದು. ನಾಥಾ, ಈಗ ತಮ್ಮ ನೇತ್ರಯುಗದಲ್ಲಿ ಏನೋ ಚಮತ್ಕಾರ ಕಾಣುವುದು.

**ಅಭಿಮನ್ಯು**:- ಏನು ಕಾಣುವುದು ? ಚೆನ್ನಾಗಿ ನೋಡು-ನನ್ನ ನೇತ್ರಯುಗದಲ್ಲಿ ನಿನಗೆ ಏನು ಕಾಣುವುದು, ಹೇಳು.

**ಉತ್ತರಾ**:-ಮತ್ತೇನು ಕಾಣುವುದು, ಈ ನೇತ್ರಯುಗದಲ್ಲಿ ನನಗೆ ನನ್ನ ಪೂರ್ವ ಪುಣ್ಯದ ಅನಂತ ಯುಗಗಳು ಕಾಣುವವು. ಮತ್ತು ಇವೇ ವಿಶಾಲವಾದ ದೃಷ್ಟಿ-ದರ್ಪಣದಲ್ಲಿ ನನ್ನ ಭಾವೀ ಭಾಗ್ಯದ ಕೋಟಿ ಬ್ರಹ್ಮಾಂಡ ಗಳು ತುಂಬಿಕೊಂಡಂತೆ ಕಾಣುವವು. ಮನೋಹರ, ಇನ್ನು ಸಾಕುಮಾಡಿರಿ; ಈ ಪ್ರೀತಿಯ ನೋಟವನ್ನು.

**ಅಭಿಮನ್ಯು**:-ಬೇಡವೆ ಹಾಗಾದರೆ, ಮತ್ತೆ ಬಾಣದಿಂದಲೇ ಘಾತಿಸುವೆನು.

**ಉತ್ತರಾ**:-ಅಯ್ಯೋ ಇದೆಂತಹ ಒರಟುತನವು? ಇರಲಿ, ಈ ವೀರ ನನ್ನು ಚೆನ್ನಾಗಿ ಶಿಕ್ಷಿಸುತ್ತೇನೆ. ಏನೆ ಸೌದಾಮಿನಿ, ವಿಲಾಸಿನಿ, ನಾನು ಈ ವೀರನನ್ನು ಬಂಧನದಲ್ಲಿರಿಸುತ್ತೇನೆ.

**ಅಭಿಮನ್ಯು**:—ಎಲ್ಲಿ ಬಂಧನ ? ಹೃದಯದ ಸೆರೆಮನೆಯಲ್ಲಿಯೇ ? ಯಾವ ಶೃಂಖಲೆಯಿಂದ ?

**ಉತ್ತರಾ**ಃ —ಪ್ರಣಯ ಶೃಂಖಲಾ (ದಾಸಿಯರು ಪುಷ್ಪಹಾರವನ್ನು ತಂದು ಕೊಡುವ ರು. ಉತ್ತರೆಯು ಅದನ್ನು ಅಭಿಮನ್ಯುವಿನ ಕೈಗೆ ಕಟ್ಟುವಳು.)

**ಅಭಿಮನ್ಯು**ಃ—ನನ್ನ ಮುದ್ದೇ, ಇಂತಹ ಸೊಗಸಾದ ಬಂಧನವು ಯಾವ ಪ್ರಣಯವೀರನಿಗೆ ರುಚಿಸಲಿಕ್ಕಿಲ್ಲ ? ಈ ಪ್ರೇಮಪಾಶವನ್ನು ಭೇದಿ ಸುವುದು ಎಂತಹ ವೀರನಿಗೂ ಸಾಧ್ಯವಿಲ್ಲ. ರಣಾಂಗಣದಲ್ಲಿ ಶತ್ರುಗಳ ಚಕ್ರವ್ಯೂಹವನ್ನು ಭೇದಿಸಬಹುದು, ಆದರೆ ಚತುರ ವನಿತೆಯ ಪ್ರೇಮವಿಲಾಸದ ಚಕ್ರವ್ಯೂಹವನ್ನು...

**ಘೋಷ**ಃ-(ಪ್ರವೇಶಿಸಿ) ಮಹಾರಾಜ, ಚಕ್ರವ್ಯೂಹವು! ಚಕ್ರವ್ಯೂಹವು!!

**ಅಭಿಮನ್ಯು**ಃ— ಯಾರು ! ಘೋಷನಾದನೇ ? ಯುದ್ಧದ ನವೀನ ವರ್ತಮಾನವೇನು ?

**ಘೋಷ**:—ಮಹಾರಾಜ, ಇದೇ ಇದೇ. ದ್ರೋಣಾಚಾರ್ಯರು ಚಕ್ರವ್ಯೂಹವನ್ನು ರಚಿಸಿರುವರು. ಪ್ರಸಂಗವು ಭಯಂಕರವಾಗಿದೆ. ಈ ದಿವಸ ಎಲ್ಲ ಪಾಂಡವರು ಚಿಂತಾತುರರಾಗಿರುವರು.

**ಅಭಿಮನ್ಯು**ಃ—ಸರಿ ಸರಿ. ಈ ವೀರ ಅಭಿಮನ್ಯುವಿಗೆ ಅದೇನು ಅಸಾಧ್ಯವಲ್ಲ. ಚಕ್ರವ್ಯೂಹವನ್ನು ಭೇಧಿಸಿ, ಸರ್ವರ ಚಿಂತೆಯನ್ನು ಪರಿಹರಿಸು ವೆನು. ಪ್ರಿಯೇ, ನನ್ನ ಕರ್ತವ್ಯವು ನನ್ನನ್ನು ಕೂಗಿ ಕರೆಯಹತ್ತಿದೆ. ಹೂ, ಜಾಗ್ರತೆಯಾಗಿ ಪುಷ್ಪವೇಷವನ್ನು ತೆಗೆ. ನನ್ನ ಖಡ್ಗವನ್ನೂ ವೀರವೇಷ ವನ್ನೂ ತಂದುಕೊಡು. ಎಲೈ ಪುಷ್ಪವೇಷವೇ, ನಿನ್ನ ಸಡಗರದ ಸಹವಾಸದ ಸೊಬಗಿನಲ್ಲಿ ನಾನು ಕಠೋರ ಕರ್ತವ್ಯವನ್ನು ಮರೆತು, ಶೃಂಗಾರದಲ್ಲಿ ತನ್ಮ ಯನಾಗಿದ್ದೆನು. ಸಡೆ ಇನ್ನು, ವೀರವೃತ್ತಿಗೆ ವಿರೋಧವಾಗುವಂತಹ ನಿನ್ನ ಸಮಾಗಮವು ನನಗೆ ಬೇಡವೇ ಬೇಡ (ಪುಷ್ಪವೇಷವನ್ನು ತೆಗೆದೊಗೆಯುವನು)

**ಉತ್ತರಾ**ಃ —ನಾಥಾ, ಬೇಡ ಬೇಡ. ನನ್ನ ಪ್ರೇಮಪಾಶವನ್ನು ಹರಿದು ಬಿಸಾಡಬೇಡಿರಿ.

**ಅಭಿಮನ್ಯು** ಃ— ಪವಿತ್ರ ಕರ್ತವ್ಯಕ್ಕೋಸುಗ ನಿನಗೂ ನಿನ್ನ ಪ್ರೇಮಕ್ಕೂ ಅಷ್ಟೇ ಅಲ್ಲ—ಪಂಚಪ್ರಾಣಗಳನ್ನು ಕೂಡ ಕ್ರೂರಕಾಲನ ಪಾದ ಪೆಡೆಯಲ್ಲಿ ಬಿಸಾಡುವುದಕ್ಕೂ ಈ ಪಾರ್ಥ ಪುತ್ರನಾದ ಅಭಿಮನ್ಯುವು

ಭಯಪಡತಕ್ಕವನಲ್ಲ. ತಿಳಿಯಿತೆ ?

ರಾಗ ದೇಸಕಾರ, ತಾಳ ತ್ರಿವಟೆ

ಮೋಹಕೆ ಪರವಶನಾದೇ । ಸಾಹಸದಿ ಲೋಕಸೇವೆ ಗೈದಲೆ
ಸ್ವಕುಲಾಧಮನಾದೆ ॥ ಪಲ್ಲ ॥ ಪಾರ್ಥನುದರದೀ । ವ್ಯರ್ಥಜನಿಸಿದೆ
ಸ್ವಾರ್ಥಸೌಖ್ಯವಾ ಬಯಸಿದೆ ನಿರಂತರ ॥ ೧ ॥

ಮೇಘನಾದಾ, ನಡೆ ಹೋಗೋಣ. (ಆವೇಶದಿಂದ ಹೋಗುವನು)

ಉತ್ತರಾಃ—ಹಾಯ್, ನಾಥಾ, ನಾಥಾ. (ಮೂರ್ಛೆ ಹೊಂದುವಳು)

---

## ೪ನೆಯ ಪ್ರಸಂಗ

(ಅರಣ್ಯದದಾರಿ. ಒಂದು ಬದಿಯಿಂದ ಸೌದಾಮಿನಿಯೂ ಇನ್ನೊಂದು ಬದಿಯಿಂದ ಮೇಘನಾದನೂ ಬರುವರು.)

**ಮೇಘ**ಃ—(ಸ್ವಗತ) ಧಿಃಕಾರವಿರಲಿ, ಈ ಸ್ತ್ರೀಯರ ಖೋಡಿ ಸ್ವಭಾವಕ್ಕೆ.

**ಸೌದಾ**ಃ—(ಸ್ವಗತ) ಬೆಂಕಿ ಹಚ್ಚಲಿ. ಈ ಪುರುಷರ ನೀಚ ಸ್ವಭಾವಕ್ಕೆ.

**ಮೇಘ**ಃ—(ಸ್ವಗತ) ಪರಮೇಶ್ವರಾ, ಪುರುಷರನ್ನು ಸ್ತ್ರೀಯರು ತಮ್ಮ ಮನಸ್ಸಿಗೆ ಬಂದಂತೆ ಕುಣಿಸುತ್ತಿರುವರು. ಇದು ನ್ಯಾಯವೇ? ಈ ಸ್ತ್ರೀ ಜಾತಿಯನ್ನು ಇದಕ್ಕೋಸುಗವೇ ನಿರ್ಮಿಸಿದೆಯಾ ?

**ಸೌದಾ**ಃ—( ಸ್ವಗತ ) ದೇವಾ ಪುರುಷರು ಸ್ತ್ರೀಯರನ್ನು ಜೋಡಿಗಿಂತ ಕಡೆಯಾಗಿ ತಿಳಿಯುವರು. ಹೆಜ್ಜೆ ಹೆಜ್ಜೆಗೆ ಒದಿಕೆ ಹಾಕುವರು. ಇದಕ್ಕೋಸುಗವೇ ಈ ನಿಷ್ಠುರ ಜಾತಿಯನ್ನು ನಿರ್ಮಿಸಿದೆಯಾ ?

**ಮೇಘ**ಃ—ಅಯ್ಯೋ ವಿಧಿಯೆ, ಈ ಸ್ತ್ರೀಯರು ನನ್ನನ್ನು ಹೇಗೆ ಕುಣಿಸಿದರು ? ಇಂದಿನ ವರೆಗೆ ನಾನು ಒಬ್ಬರಿಂದಲೂ ಅಪಮಾನಪಟ್ಟವನಲ್ಲ! ಆದರೆ, ಆ ಪರಸ್ತ್ರೀಯರು ನನ್ನ ದುರ್ದೆಶೆಯನ್ನು ಚೆನ್ನಾಗಿ ಮಾಡಿದರು; ಮತ್ತು ಮನೆಯ ಹೆಂಡತಿಯು ಪರಕೆಯಿಂದಲೂ ಏಟು ಹಾಕಿದಳು. ಇರಲಿ ಮೆಲ್ಲಗೆ ಮಾತಾಡೋಣ ಇಲ್ಲವಾದರೆ ಪುನಃ ಏಟುಗಳು ಬಿದ್ದಾವು ಬೆನ್ನಮೇಲೆ........

ಸೌದಾ:—ಈ ಪುರುಷರು ಎಂತಹ ವಿಚಾರಶೂನ್ಯರು. ಚಿಕ್ಕಮಹಾರಾಜರು ರಾಣಿಯವರನ್ನು ಲಕ್ಷಿಸದೆ ಹೊರಟು ಹೋದರು. ಪಾಪ, ಅವರು ಮೂರ್ಛಿತರಾಗಿ ಭೂಮಿಗೆ ಬಿದ್ದರೂ ಆ ವಿಷಯವಾಗಿ ಚಿಕ್ಕಮಹಾರಾಜರಿಗೆ ಏನಾದರೂ ಸ್ವಲ್ಪ ದಯೆಯಾಯಾ! ಇಲ್ಲವೆ ಇಲ್ಲ. ಈ ಪುರುಷರ ಜಾತಿಯನ್ನು ಸ್ವಲ್ಪ ರಾಕ್ಷಸ ಜಾತಿಗೇ ಹೋಲಿಸಬಹುದು. ಹಾಗೆಯೇ ನಮ್ಮ ಪತಿರಾಜರು.

ಮೇಘ:—ಹಾಗೆ ನಮ್ಮ ರಾಣೀಸಾಹೇಬರು ಈ ಸ್ತ್ರೀಯರು ನೋಡುವುದಕ್ಕೆ ಮನೋಹರ, ಆದರೆ ಹೃದಯ ಕಠೋರ. ಅವರ ಮುಖವನ್ನು ಸಹ ನೋಡಬಾರದು.

ಸೌದಾ:—ಛೀ ತಾಯಿ, ಪುರುಷರ ಮುಖವನ್ನು ಸಹ ನೋಡಬಾರದು. (ಇಬ್ಬರು ಎದುರುಬದರಾಗಿ ಹಾಯುವರು. ಸೌದಾಮಿನಿಯು ಕೋಪಿಸುವಳು, ಮೇಘನಾದನು ಗಾಬರಿಯಾಗುವನು) ಅಮ್ಮಯ್ಯಾ, ಯಾರದು? ತಮ್ಮನ್ನಾರಿಯೇ? ಕಣ್ಣು ಹೋದವೇನು? ಸ್ವಲ್ಪ ಮುಂದೆ ನೋಡಿ ನೆಟ್ಟಗೆ ನಡೆಯಿರಿ.

ಮೇಘ:—ನೆಟ್ಟಗೆ ನಡಿಯುವ ವಿಷಯವಾಗಿ ಮೊದಲು ಸ್ತ್ರೀಯರು ಎಚ್ಚರವಾಗಿರಬೇಕು.

ಸೌದಾ:—ಯಾಕೆ ಕಣ್ಣುಗಳು ನೆತ್ತಿಗೇರಿದವೇನು?

ಮೇಘ:—(ಮೇಲೆ ನೋಡಿ) ದೇವರ ಪ್ರಾರ್ಥನೆಗೋಸ್ಕರ! ಭಗವಂತಾ ಈ ಪುರುಷರನ್ನು ಈ ಸ್ತ್ರೀಯರ ಬಂಧನದೊಳಗಿಂದ ಬೇಗನೆ ರಕ್ಷಿಸು. ಹೇ, ಅನಂತ ಆಕಾಶಸ್ಥ ದೇವತೆಗಳಿರಾ, ಈ ನಿಮ್ಮ ಪ್ರೀತಿಯ ಬಾಲಕನಿಗೆ ಇಷ್ಟು ಆಶೀರ್ವಾದವನ್ನು ದಯವಿಟ್ಟು ಮಾಡಿರಿ.

ಸೌದಾ:—ಅದೇಕೆ, ಸ್ತ್ರೀಯರ ಮೇಲೆ ಇಷ್ಟೇಕೆ ನಿಮ್ಮ ವಕ್ರದೃಷ್ಟಿ?

ಮೇಘ:—(ಸ್ವಗತ) ಕೃಪಾದೃಷ್ಟಿಗೆ ಅವಕಾಶವಿಲ್ಲ. (ಪ್ರ) ಜೀಡಪ್ಪಾ ತಪ್ಪಾಯಿತು. ಇನ್ನು ಮುಂದೆ ಹೀಗೆ ಮಾತಾಡುವುದಿಲ್ಲ.

ಸೌದಾ:—ಪುರುಷನಿಗೆ ಸ್ತ್ರೀಯೆಂದರೆ ಇಷ್ಟದೇವತೆ!

ಮೇಘ:—(ಸ್ವಗತ) ಅನಿಷ್ಟ ದೇವತೆ. (ಪ್ರ) ಆದರೆ ಪತಿಗೆ ಪತ್ನಿಯೆಂದರೆ ಪರಮೇಶ್ವರ ಸಮಾನನಲ್ಲವೇ?

**ಸೌದಾ**:--ನಿಮ್ಮಂಥ ಪತಿದೇವರ ಪೂಜೆಯನ್ನು ಹೀಗೆ ಮಾಡಬೇಕು. (ಹೊಡೆಯುವಳು) ಮಾತಾಡಿರಿ, ನಾನು ನಿಮಗೆ ಇಷ್ಟದೇವತೆಯಲ್ಲವೇ ? ಒಪ್ಪಿಕೊಳ್ಳಿರಿ, ಒಪ್ಪಿಕೊಳ್ಳಿರಿ.

**ಮೋಘ**:--ಒಪ್ಪಿದೆ ಒಪ್ಪಿದೆ. ಇಷ್ಟದೇವತೆಯಿರುವಿ; ಪೂಜ್ಯಳಾಗಿರುವಿ ವಂದ್ಯಳಾಗಿರುವಿ. ದೇವತೆ, ನಿನ್ನ ಗುಣಾನುವಾದನವನ್ನು ಎಷ್ಟೆಂದು ವರ್ಣಿಸಲಿ. ಹೇ ಚಂಡಿಕೆ, ಪ್ರಸನ್ನಳಾಗಿ ಕೋಪವನ್ನು ಶಾಂತಗೊಳಿಸು.

**ಸೌದಾ**:—ಇಂದಿನಿಂದ ನೀವು ನನ್ನ ಅರ್ಧವಚನದಂತೆ ನಡೆಯುವಿರಷ್ಟೆ ?

**ಮೋಘ**—ಅದೇಕೆ, ನಾನೇನು ಲರಿಗಜ್ಜ್ಕ ಮನುಷ್ಯನಲ್ಲ.

**ಸೌದಾ**.—ಏನು, ಏನು ಮಾತಾಡಿದಿರಿ ? ಇಂದಿನಿಂದ ನೀವು ನನ್ನ ಅರ್ಧ ವಚನದಂತೆ ನಡೆಯುವಿರಷ್ಟೆ !

**ಮೋಘ**:— ಅರ್ಧವೇಕೆ, ಸಂಪೂರ್ಣವಚನದಂತೆ ನಡೆಯುವೆನು. ಇಗೋ ತೆಗೆದುಕೋ ವಚನವನ್ನು.

**ಸೌದಾ**:— ಹಾಗಾದರೆ ಕೇಳಿರಿ ಚಿಕ್ಕಮಹಾರಾಜರು ಯುದ್ಧಕ್ಕೆ ಹೊರಟಿರುವರು. ಅವರ ಜೊತೆಯಲ್ಲಿ ನೀವು ಹೋಗಲೇಬೇಕು. ನನ್ನ ಆಜ್ಞೆಯಿದು. ತಿಳಿಯಿತೇ ?

**ಮೋಘ**:—[ಸ್ವಗತ] ನಿನ್ನ ಆಜ್ಞೆಯೆಂದರೆ ದೇವಾಜ್ಞೆಯೇ ಸರಿ ! [ಪ್ರಕಾಶ] ಒಳ್ಳೆದು ನಿನ್ನ ಆಜ್ಞೆಯು ಶಿರಸಾವಾನ್ಯವಿದೆ.

**ಸೌದಾ**:--ನಡೆಯಿರಿ ಇನ್ನು ಮನೆಗೆ. ನಿಮ್ಮ ಪರಾಕ್ರಮವನ್ನು ನೋಡುತ್ತೇನೆ

(ಸಂವಾದ)

ನೋಡುವ ನಿಮ್ಮ ಪರಾಕ್ರಮವಾ । ಪೋಗಿರಿ ಕಾಳಗಕೆ
ಹುಡುಗಾಟ ಸಾಕು ಬಲ್ಲೆನೆಲ್ಲವ ಜಾಣತನದ ಬಗೆಯ ।

**ಮೋಘ**

ಮುದ್ದು ಚನ್ನವೆ ಅಗಲಿ ನಿನ್ನನೂ । ಯುದ್ಧಕೆಂತು ನಾ
ಪೋಗಲಿಯೋ ॥ ಇದ್ದು ಮನೆಯೊಳು ವೀರತನದಲಿ ।
ಕದ್ದು ತಿನ್ನುತೇ ಯುದ್ಧದ ಗೈಯುವೆ ನಿನ್ನೊಡನೆ ಸತಿಯೇ ॥ ೧ ॥

ಹೂ, ನಡೆ, ಮನೆಗೆ, ನನ್ನ ಪರಾಕ್ರಮವನ್ನು ತೋರಿಸುತ್ತೇನೆ. ಆದರೆ ಯುದ್ಧದ ಹೆಸರು ಮಾತ್ರ ತೆಗೆಯಬೇಡ. ಪರಮೇಶ್ವರಾ, ಧಿಕ್ಕಾರ, ಧಿಕ್ಕಾರವಿರಲಿ ಈ ಸ್ತ್ರೀಯರಿಗೆ. (ಉಭಯತರು ಹೋಗುವರು)

## ಐದನೆಯ ಪ್ರಸಂಗ

[ ಪಾಂಡವರ ಬಿಡಾರ. ಧರ್ಮರಾಜನು ಚಿಂತಾತುರನಾಗಿರುವನು. ಸಮೀಪದಲ್ಲಿ ಭೀಮನು ನಿಂತಿರುವನು. ]

**ಭೀಮ:**—ಧರ್ಮರಾಜಾ ! ನಿನ್ನಿನಿಂದ ವಿಜಯ ದೇವತೆಯು ನಮಗೇ ಪ್ರಸನ್ನಳಾಗಿರುವಳು. ನಿನ್ನೆ ವೀರ ಪಾರ್ಥನಿಂದ ದ್ರೋಣಾಚಾರ್ಯರು ಪರಾಜಿತರಾದರು. ನಮ್ಮ ಆನಂದಕ್ಕೆ ಕಳೆಯೇರಿತು. ಇನ್ನು ಮತ್ತೇಕೆ ಚಿಂತಿಸುವಿರಿ ?

**ಧರ್ಮ:**—ಭೀಮಾ, ಯುದ್ಧದಲ್ಲಿ ಯಶಾಪಯಶದ ವಿಚಾರ ಮಾಡುವುದು ನಿರರ್ಥಕವು. ಸಮರಾಂಗಣದಲ್ಲಿ ಭುಜಕ್ಕೆ ಭುಜ ಕೊಟ್ಟು ಶತ್ರುಗಳೊಂದಿಗೆ ಹೋರಾಡುತ್ತಿರಲು ಯಶಾಪಯಶವು, ದೈವಾಧೀನವು. ಇಂದಿನವರೆಗೆ ವಿಜಯವು ಉಭಯ ಪಕ್ಷದವರಿಗೂ ಸಮಪ್ರಮಾಣದಲ್ಲಿದೆಯೆಂದು ನನ್ನ ಅಭಿಪ್ರಾಯ.

**ಭೀಮ:**—ಆದರೂ ಕೊನೆಗೆ ನಮ್ಮ ಪಕ್ಷಕ್ಕೆ ಯಶವು ದೊರೆಯುವುದೇ

**ಧರ್ಮ:**—ಆದರೆ ಈ ದಿವಸದ ಹೊಸ ವರ್ತಮಾನವೇನು ?

**ನಕುಲ:**—[ಪ್ರವೇಶಿಸಿ] ಈ ದಿನ ಯುದ್ಧದ ಬಣ್ಣವೇ ಬದಲಾಗಿದೆ. ಸಂಶಪ್ತಕರು ಪುನಃ ಹುರಿಗೊಂಡು ಯುದ್ಧವನ್ನು ಪ್ರಾರಂಭಿಸಿರುವರು. ಶ್ರೀಕೃಷ್ಣನೂ ಅಣ್ಣನೂ ಅತ್ತ ಕಡೆಗೆ ಆಗಲೇ ಹೋಗಿರುವರು.

**ಸಹದೇವ:**—[ಪ್ರವೇಶಿಸಿ] ಆದರೆ ಇತ್ತ ಕಡೆಗೆ ಗೂಢಚಾರನು ಬಹಳ ಭಯಂಕರವಾದ ವರ್ತಮಾನವನ್ನು ತಂದಿರುವನು.

**ಭೀಮ**:—ಅದೇನು ?

**ಸಹದೇವ** :-- ದ್ರೋಣಾಚಾರ್ಯರು ಚಕ್ರವ್ಯೂಹವನ್ನು ರಚಿಸಿರುವರಲ್ಲದೆ, ಧರ್ಮರಾಜನನ್ನು ಜೀವಂತವಾಗಿ ಬಂಧಿಸಿ ತರುವೆನೆಂದು ಪ್ರತಿಜ್ಞೆಯನ್ನು ಮಾಡಿರುವರು; ಮತ್ತು ಇದೆಲ್ಲವೂ ಶಕುನಿಯ ಕಪಟಕಾರಸ್ಥಾನವಂತೆ

**ಭೀಮ**: -ಅಹುದು ನಿಶ್ಚಯವಾಗಿಯೂ ಕಪಟವು. ಶಕುನಿಯೆಂಬವರ ಕಾಪಟ್ಯದ ಸದನವು.

**ಧರ್ಮ**:---ಇದು ಚಕ್ರವ್ಯೂಹವಲ್ಲ; ಆಚಾರ್ಯರು ಕಪಟವ್ಯೂಹವನ್ನೇ ರಚಿಸಿರುವರು. ಅತ್ತಕಡೆಗೆ ಅರ್ಜುನನು ಸಂಶಪ್ತಕರೊಡನೆ ಯುದ್ಧದಲ್ಲಿ ತೊಡಗಿದ್ದರಿಂದ–

**ಭೀಮ**:—(ಆವೇಶದಿಂದ) ಧರ್ಮರಾಜಾ, ಆ ಚಕ್ರವ್ಯೂಹವನ್ನು ಈ ಪರಾಕ್ರಮಿಯಾದ ಭೀಮನು ಒಂದು ನಿಮಿಷದಲ್ಲಿ ಭೇದಿಸಿ ನಾಶಗೊಳಿಸುವನು. ಏತಕ್ಕೆ ಚಿಂತಿಸುವಿರಿ ? ಎಲ್ಲಿಯವರೆಗೆ ಶ್ರೀಕೃಷ್ಣನ ಕೈಯಲ್ಲಿ ಸುದರ್ಶನವಿದೆಯೊ, ಅರ್ಜುನನ ಕೈಯಲ್ಲಿ ಗಾಂಡೀವ ಧನುಸ್ಸಿದೆಯೊ, ವಜ್ರದೇಹಿಯಾದ ಭೀಮನ ಕೈಯಲ್ಲಿ ಗದೆ ಇದೆಯೊ ಅಲ್ಲಿಯವರೆಗೆ, ಇಂತಹ ಕೋಟಿ ಚಕ್ರವ್ಯೂಹಗಳ ಪಾಡೇನು, ಕಪಟಪಕ್ಷಕ್ಕೆ ಎಂದೂ ಜಯವು ದೊರೆಯಲಾರದು ಸತ್ಯ ಪಕ್ಷಕ್ಕೇಯದವು ಸಿಗುವುದು. ಈ ಗದೆಯ ಶಕ್ತಿಯು ಬ್ರಹ್ಮಾಂಡವನ್ನೇ ಚೂರ್ಣ ಗೊಳಿಸುವುದಕ್ಕೆ ಸಮರ್ಥವಾಗಿರುವುದು ಅಪ್ಪಣೆಯಾಗಲಿ, ಹಾ ಹಾ ಅನ್ನುವಷ್ಟರಲ್ಲಿ ಚಕ್ರವ್ಯೂಹವನ್ನು ಭೇದಿಸಿ, ನಿಜಯವನ್ನೇ ಸಂಪಾದಿಸುವೆನು.

**ಧರ್ಮ**:—ಭೀಮಾ, ನಿನ್ನ ಪರಾಕ್ರಮವು ಅದ್ಭುತವಾಗಿದೆ. ಆದರೆ ಅದರಿಂದ ಈ ಸಮಯದಲ್ಲಿ ಉಪಯೋಗವೇನು ? ಚಕ್ರವ್ಯೂಹವನ್ನು ಭೇದಿಸುವ ವಿದ್ಯೆಯನ್ನು, ಅರ್ಜುನನೊಬ್ಬನೇ ಬಲ್ಲನು. ಅವನಂತೂ ಸಂಶಪ್ತಕರೊಂದಿಗೆ ಯುದ್ಧದಲ್ಲಿ ತೊಡಗಿರುವನು. ಚಕ್ರವ್ಯೂಹವೆಂಬರ ಅಕ್ರಾಳ ವಿಕ್ರಾಳವಾದ ಪ್ರತ್ಯಕ್ಷ ಕಾಲನ ನಿವಾಸಸ್ಥಳವು. ಅದನ್ನು ಭೇದಿಸಲಿಕ್ಕೆ ಸಮರ್ಥನು ಅರ್ಜುನನೇ; ಆ ವೀರಸಿಂಹನೇ ! ಆದರೆ---

**ಅಭಿಮನ್ಯು**: —(ಪ್ರವೇಶಿಸಿ) ಆದರೆ, ಆದರೆ ಏನು? ಆ ವೀರ ಸಿಂಹನು ಇಲ್ಲಿ ಇಲ್ಲದಿದ್ದರೂ, ಇದೋ ಆ ಕುಮಾರ ಸಿಂಹನು ನಿಮ್ಮೆದುರಿಗೆ ನಿಂತಿರುವನು; ಸುಮ್ಮನೆ ಏತಕ್ಕೆ ಚಿಂತಿಸುವಿರಿ ?

**ಧರ್ಮ**:—ಯಾರು ವತ್ಸ-ಅಭಿಮನ್ಯುವೇ ?

**ಅಭಿಮನ್ಯು**:—ಅಹುದು, ಈ ಅಭಿಮನ್ಯುವಿಗೆ ತಾವು ಆಜ್ಞೆಯನ್ನೀಯರಿ. ಚಕ್ರವ್ಯೂಹವನ್ನು ಭೇದಿಸಿ, ಈ ಅಭಿಮನ್ಯು ಎಂಬ ನಾಮವನ್ನು ಸಾರ್ಥಕಗೊಳಿಸುವೆನು. ಲೋಕಧುರಂಧರನಾದ ಧನುರ್ಧಾರೀ ವೀರಪಾರ್ಥನ ಪುತ್ರನಾದ ಅಭಿಮನ್ಯುವು....!

**ಧರ್ಮ**:—ಆಹಹಾ ! ವತ್ಸಾ, ನೀನು ಆ ವೀರಸಿಂಹನ ಕುಮಾರ ಸಿಂಹನೇ ನಿಶ್ಚಯ ! ಉದಯೋನ್ಮುಖ ರಾಷ್ಟ್ರದ ಬಾವೀ ಆಧಾರಸ್ತಂಭರೇ, ಈ ಚಿಕ್ಕ ಬಾಲವೀರನ ಉತ್ಸಾಹವನ್ನು ನೋಡಿರಿ. ಕುಮಾರಾ, ನಿನ್ನೀ ವೀರಶ್ರೀಯ ಕೌತುಕವನ್ನು ಯಾವ ಶಬ್ದಗಳಿಂದ ಪ್ರಶಂಸಿಸಲಿ !

**ಅಭಿಮನ್ಯು**:—ಕಕ್ಕಾ, ಚಕ್ರವ್ಯೂಹದ ವಾರ್ತೆಯನ್ನು ನಾನು ಆಗಲೇ ಕೇಳಿದೆನು; ಮತ್ತು ಆ ಕಾಲಕ್ಕೇ ಅದನ್ನು ಭಂಗಪಡಿಸುವದಕ್ಕೆ ಮನಸ್ಸಿನಲ್ಲಿ ಸಂಕಲ್ಪವನ್ನೂ ಮಾಡಿದೆನು? ತಮ್ಮ ಅಪ್ಪಣೆಯ ನಲುವಾಗಿ ಆಶೀರ್ವಾದದ ಅಪೇಕ್ಷೆಯಿಂದ, ಆವೇಶದ ಉತ್ಸಾಹದಿಂದ, ಈ ಪುಣ್ಯ ಚರಣಗಳ ಕಡೆಗೆ ಓಡಿ ಬಂದೆನು. ಹೂ, ಜಾಗ್ರತೆಯಾಗಿ ಅಪ್ಪಣೆಕೊಡಿರಿ.

**ಭೀಮ**:—ಅಭಿಮನ್ಯು ನೀನು ಯುದ್ಧಕ್ಕೆ ಹೋಗುವುದು ಇದೇ ಪ್ರಥಮ ಪ್ರಸಂಗವಿದೆ.

**ಅಭಿಮನ್ಯು**:— ಆದರೇನಾಯಿತು ? ನನ್ನ ಪ್ರಥಮೋತ್ಸಾಹವನ್ನು ತಾವು ಪೂರ್ತಿಗೊಳಿಸುವುದಿಲ್ಲವೆ ?

**ಧರ್ಮ**:—ಚಕ್ರವ್ಯೂಹವನ್ನು ಭೇದಿಸುವುದು ಬಹಳ ಕಠಿಣ ಕಾರ್ಯವುದು. ಆ ಗುಪ್ತ ವಿದ್ಯೆ....

**ಅಭಿಮನ್ಯು**:—ಅದೆಲ್ಲವನ್ನೂ ನಾನೂ ಬಲ್ಲೆನು. ನನ್ನ ಪುಣ್ಯಶೀಲ ಮಾತೆಯ ಗರ್ಭಕೋಶದಲ್ಲಿರುವಾಗಲೇ ಆ ವಿದ್ಯೆಯನ್ನು ತಂದೆಯವರ ಮುಖದಿಂದ ಕೇಳಿರುವೆನು. ಚಕ್ರವ್ಯೂಹದಲ್ಲಿ ಪ್ರವೇಶ ಮಾಡುವುದನ್ನು ನಾನು ಚನ್ನಾಗಿ ಬಲ್ಲೆನು.

**ಧರ್ಮ**:—ಪ್ರವೇಶಮಾಡುವುದು ನಿನಗೆ ಗೊತ್ತಿದ್ದರೂ ಮರಳಿ ಬರುವುದನ್ನು ನೀನು ಅರಿತವನಲ್ಲ.

**ಅಭಿಮನ್ಯು**:—ಛೇ. ಅದೇನು ಮಹಾ ವಿದ್ಯೆಯು? ಒಳಗೆ ಹೋದ ಮೇಲೆ ಹೊರಗೆ ಬರುವುದೇನು ಕಠಿಣವಲ್ಲ.

**ನಕುಲ** :— ಯಾವುದೊಂದು ವಿಷಯದ ಅಪೂರ್ಣ ಜ್ಞಾನವು ಘಾತಕ ವಿರುವುದು

**ಸಹದೇವ** : - ಯುದ್ಧವೆಂದರೆ ನಿನಗೆ ಹುಡುಗರ ಆಟವೆಂದೆನಿಸು ವದೊ ಹೇಗೆ ?

**ಅಭಿಮನ್ಯು**:—ಆಟವಲ್ಲದೆ ಮತ್ತೇನು ? ವೀರ ಕ್ಷತ್ರಿಯ ಕುಮಾರನಿಗೆ ಇಂತಹ ಆಟವೇ ರುಚಿಸುವುದು. ಈ ಕತ್ತಿಯಿಂದ ಶತ್ರುಗಳ ಮುಂಡಗಳನ್ನು ಚಂಡಿನಂತೆ ಆಕಾಶದಲ್ಲಿ ಹೇಗೆ ಹಾರಿಸುವೆನೆಂಬುದನ್ನು ನೋಡಿಯಾದರೂ ನೋಡಿರಿ. ನೀವೇ ಏಕೆ, ಶತ್ರುಗಳು ಕೂಡ ಆಶ್ಚರ್ಯಚಕಿತರಾಗುವಂತೆ ಮಾಡುವೆನು. ಕೃತಾಂತ ಕಾಲನ ಕೂಡ ಆಟವಾಡುವಂಥ ಈ ಅಮೌಲ್ಯ ಸಮಯವನ್ನು ನಾನು ವ್ಯರ್ಥಗೊಳಿಸುವುದಿಲ್ಲ

**ಭೀಮ**:— ಆದರೆ ಇಂತಹ ಪರಾಕ್ರಮವನ್ನು ತೋರಿಸುವುದಕ್ಕೆ ವಯಸ್ಸು ಚಿಕ್ಕದಾಗಿದೆ.

**ಅಭಿಮನ್ಯು**:--ಕಕ್ಕಾ, ಸಿಂಹದ ಮರಿಯು ಅರಣ್ಯದಲ್ಲಿಯ ಯಾವತ್ತೂ ಕಾಡು ಮೃಗಗಳನ್ನು ಕೂಡ, ಹಣ್ಣಿಗೆ ತರುವುದಲ್ಲವೆ ?

ರಾಗ ಪಹಡಿ, ತಾಳ ತ್ರಿವಟಿ

ಬೇಡಿಕೊಂಬೆ । ಸಮರಕಾಜ್ಞಾ । ಕೊಡುವುದೀಗಾ ॥ ಪಲ್ಲ ॥
ಭಯವದೇಕೇ । ದುಗುಡವದೇಕೆ । ನಯದಿ ಬಿನ್ನೈಪೇ
ಮನದಾಸೆಯಾ ॥ ೧ ॥

**ಭೀಮ**:— ಈ ನಿನ್ನ ಹಟವನ್ನು ನೋಡಿದರೆ ನನಗೆ ಬಹಳೇ ಆಶ್ಚರ್ಯವೆನಿಸುವುದು.

**ಧರ್ಮ**:—ಮಗೂ, ಪ್ರಸಂಗವು ಕಠಿಣವಿದೆ; ಇಲ್ಲದ ದುರಾಗ್ರವನ್ನು ಮಾಡಬೇಡ.

**ನಕುಲ** :— ಈ ನಕುಲನು, ಸಹದೇವನು, ಅಗ್ರಜನಾದ ಭೀಮನು, ಇಂತಹ ಒಬ್ಬರಿಗಿಂತೊಬ್ಬರು ಬಲಾಢ್ಯರಾದ ವೀರರು ಇರುತ್ತಿರಲು, ನಿನ್ನಂತಹ ಕೋಮಲ ಬಾಲಕನನ್ನು ಯುದ್ಧಕ್ಕೆ ಕಳುಹಿದರೆ ನಾವು, ಲೋಕ ನಿಂದೆಗೆ ಗುರಿಯಾಗಬೇಕಾದೀತು.

ಅಭಿಮನ್ಯು.—ಆದರೆ ಪ್ರತಿಜ್ಞೆ ಮಾಡಿದಂತೆ ಚಕ್ರವ್ಯೂಹವನ್ನು ಭೇದಿಸದಿದ್ದರೆ ಲೋಕನಿಂದೆಗೆ ನಾನೂ ಗುರಿಯಾಗಬೇಕಲ್ಲವೆ? ಅದೇನೂ ಇಲ್ಲ. ಕಕ್ಕಾ, ನನಗೆ ಆಜ್ಞೆಯನ್ನೀಯಿರಿ. ನನ್ನ ಬಾಹುಗಳು ಸ್ಫುರಣವಾಗಹತ್ತಿರುವವು. ಮೈಯೊಳಗಿನ ರಕ್ತವು ಉಕ್ಕೇರುವುದಕ್ಕೆ ಪ್ರಾರಂಭಿಸಿತು. ಚಕ್ರವ್ಯೂಹವನ್ನು ನಡೆಬಡಿಯುವುದಕ್ಕೆ ನನ್ನ ಮನಸ್ಸು ಬಹಳೇ ಉತ್ಕಂಠಿತವಾಗಿರುವುದು; ಬೇಗನೆ ನನಗೆ ಅಪ್ಪಣೆ ಕೊಡಿರಿ ಇದೋ ನಾನು ಹೊರಟೆನು

ಸುಭದ್ರಾ — [ಪ್ರವೇಶಿಸಿ] ಯಾರು! ನನ್ನ ಮುದ್ದು ಕುಮಾರನು ಚಕ್ರವ್ಯೂಹವನ್ನು ಭೇದಿಸುವುದಕ್ಕೆ ಹೊರಟನೆ?

ಅಭಿಮನ್ಯು:— ಹೌದು, ಅಮ್ಮಾ ನಿನ್ನಂತಹ ವೀರಮಾತೆಯ ಪವಿತ್ರ ಉದರದಲ್ಲಿ ಜನಿಸಿ, ಅವಳ ಹಾಲು ಕುಡಿದು ಬೆಳೆದಂತಹ ಈ ಭಾಗ್ಯಶಾಲಿಯಾದ ಅಭಿಮನ್ಯುವೇ, ಚಕ್ರವ್ಯೂಹವನ್ನು ಭೇದಿಸುವುದಕ್ಕೆ ಹೊರಟಿರುವನು ಅಮ್ಮಾ, ನನ್ನ ಅಂಗದಲ್ಲಿ ವೀರ ರಕ್ತವು ಕುದಿಯುತ್ತಿರುವುದು, ಅದಕ್ಕೆ ಸರಿಯಾದ ಪರಾಕ್ರಮವನ್ನು ತೋರಿಸದಿದ್ದರೆ ಪ್ರಯೋಜನವೇನು?

ಸುಭದ್ರಾ:—ಅಮ್ಮಯ್ಯಾ ಏನೀ ಆವೇಶವು! ಮಗುವೇ, ಈ ದಿವಸ ನಿನ್ನ ಅಂಗದಲ್ಲಿ ದೇವರ ಸತ್ವವೂ, ದೈತ್ಯರ ಬಲವೂ ಸಂಚರಿಸುವಂತೆ ಕಾಣುವುದು. ಆದರೆ ಇಂತಹ ಹಟಕ್ಕೆ ನಾನೆಂದಿಗೂ ಅವಕಾಶ ಕೊಡತಕ್ಕವಳಲ್ಲ, ಭಾವನವರೆ,—

ಭೀಮ:—ಅಮ್ಮಾ, ಅವನನ್ನು ಸಮಾಧಾನ ಪಡಿಸುವುದು ನಮ್ಮಿಂದ ಸಾಧ್ಯವಿಲ್ಲ. ನೀನೇ ಏನಾದರೂ ಬುದ್ಧಿಯನ್ನು ಹೇಳು.

ಸುಭದ್ರಾ:—ಕುಮಾರಾ, ಇನ್ನೂ ನಿನ್ನ ತುಟಿಯ ಮೇಲಿನ ಜೊಲ್ಲು ಕೂಡ ಒಣಗಿಲ್ಲ. ಈಗ ತಾನೇ ಮೊನ್ನೆ ಮೊನ್ನೆ, ಹದಿನೈದು ವರ್ಷಗಳು ತುಂಬಿ ಹದಿನಾರರಲ್ಲಿ ಬಿದ್ದಿದೆ.

ಅಭಿಮನ್ಯು:—ಅಮ್ಮಾ, ನನ್ನ ವಯಸ್ಸು ಚಿಕ್ಕದಾದರೂ ನನ್ನ ಪರಾಕ್ರಮವು ಅದ್ಭುತವಾಗಿದೆ, ಗ್ರಾಮದೇವತೆಯ ಕೋಣದಂತೆ ಶರೀರವನ್ನು ಪುಷ್ಟವಾಗಿ ಬೆಳೆಸಿ, ಹೇಡಿಯಾಗಿ ಮನೆಯಲ್ಲಿರುವುದಕ್ಕೆ ನನ್ನ ಮನಸ್ಸು ಒಪ್ಪುವುದಿಲ್ಲ. ಪ್ರಖರವಾದ ತೇಜಸ್ಸಿನಿಂದ ಜಗತ್ತನ್ನು ಪ್ರಕಾಶಿಸಿ, ಅಕಾಲದಲ್ಲಿಯೇ ಪತನವಾಗುವ ನಕ್ಷತ್ರದಂತಹ ಅಲ್ಪ ಜೀವನವೇ ನನಗೆ

ಘಸ್ಯೆಂಗಿಸಿಸುವುದು. ಅಮ್ಮಾ, ಗಮಗಮಿಸುವ ಪುಷ್ಪಗಳು ವೃಕ್ಷದಿಂದ ಒಮ್ಮೆ ಜಾಗ್ರತೆಯಾಗಿ ಕಳಚಿ ಬೀಳುವುವು; ಆದರೆ ಲೋಕಕ್ಕೆ ಆನಂದವನ್ನು ಕೊಡುವುವು. ಸತ್ಕೃತ್ಯದಿಂದಲೇ ಜನ್ಮ ಸಾರ್ಥಕವಾಗುವದು. ಕೇವಲ ದೀರ್ಘಾಯುಷ್ಯದಿಂದ ಸಾರ್ಥಕವಾಗದು. ನನ್ನ ಸತ್ಕೀರ್ತಿಯ ಸುಗಂಧವು ಲೋಕದಲ್ಲಿ ಪಸರಿಸಿದಮೇಲೆ ನನಗೆ ಮರಣ ಬಂದರೂ–

**ಸುಭದ್ರಾ:**—ಮಗುವೆ, ಹೀಗೆ ಅಭದ್ರ ಮಾತಾಡಬೇಡ. ದೇವಿ ಜಗದಂಬೆ ಅಮಂಗಳವಳಿದು ಮಂಗಳವಾಗಲಿ.

**ಅಭಿಮನ್ಯು:**—ಅಮ್ಮಾ ನೀನು ನನ್ನ ಮರಣಕ್ಕೆ ಭಯಪಡುವಿಯಾ? ರಣಾಂಗಣದಲ್ಲಿ ಕಾದುತ್ತ ಕಾದುತ್ತ ನನಗೆ ಮರಣಬಂದರೆ--ಅಹಹ ! ನನ್ನ ಸಮಾನ ಭಾಗ್ಯಶಾಲಿಯು ನಾನೇ. ನಗುನಗುತ್ತ ಸ್ವರ್ಗದಸಿಂಹಾಸನವನ್ನೇ ರುವೆನು. ಆತ್ಮೋದ್ಧಾರದ ಜೊತೆಗೆ; ಪಿತೃಕುಲವನ್ನು ಉದ್ಧರಿಸುವೆನು, ಮತ್ತು ಅಭಿಮನ್ಯು ಎಂಬ ನಾಲ್ಕು ಅಕ್ಷರಗಳನ್ನು ಚಿರಂಜೀವಿ ಮಾಡುವೆನು.

**ಸುಭದ್ರಾ:**—ಮಗುವೆ, ಬೃಹಸ್ಪತಿಯ ರಸವಾಣಿಯು ನಿನ್ನ ತುಟಿಯ ಮೇಲೆ ಅವತರಿಸಿತು; ವೀರಾತ್ಮನ ವೀರಶ್ರೀಯು ರೋಮ ರೋಮದಲ್ಲಿ ಸಂಚರಿಸಿತು.

**ಅಭಿಮನ್ಯು:**—ಅಮ್ಮಾ, ಬೇಡ ಬೇಡ, ನನ್ನನ್ನು ನಿರ್ಬಂಧಿಸಬೇಡ, ನನ್ನ ಮನಸ್ಸು ಬಹಳೇ ಉತ್ಕಂಠಿತವಾಗಿರುವುದು. ವಿಜಯಶ್ರೀಯನ್ನು ಸಂಪಾದಿಸಿ ಸಂತೋಷದಿಂದ, ನಾನು ಜಾಗ್ರತೆಯಾಗಿ ನಿನ್ನನ್ನು ಕಾಣಬರು ವೆನು. ಅಮ್ಮಾ, ನನ್ನ ಧೈರ್ಯವನ್ನು ಕುಗ್ಗಿಸಬೇಡ. ನಾನು ವೀರ ಕುಮಾರನಲ್ಲವೆ ? ತ್ರೈಲೋಕ್ಯ ಧುರಂಧರ ಪಾರ್ಥರಾಜನ ಕುಲದೀಪಕ ನಲ್ಲವೆ ?

**ಸುಭದ್ರಾ:**- ಹೌದು, ಮಗುವೆ, ನೀನು ಆ ಶ್ರೇಷ್ಠ ಕುಲದಲ್ಲಿ ಜನಿಸಿದ ವೀರಕುಮಾರನೇ ಇರುವೆ.

**ಅಭಿಮನ್ಯು:**--ಹಾಗಾದರೆ ನನ್ನ ಶ್ರೇಷ್ಠ ಕುಲಕ್ಕೆ ಒಪ್ಪುವಂತಹ ಶ್ರೇಷ್ಠ ಕಾರ್ಯವನ್ನು ಮಾಡುವುದು, ನನಗೆ ಭೂಷಣವಲ್ಲವೇ ? ಯಾವನು ಮನೆತನದ ಪ್ರತಿಷ್ಠೆಯನ್ನೂ. ಕುಲದ ಕೀರ್ತಿಯನ್ನೂ ಬೆಳೆಯಿಸುವನೊ, ಅವನೇ ನಿಜವಾದ ಪುತ್ರನು. ಸತ್ತರೆ ವೀರನಾದ ನಾನು, ಸಮರಾಂಗಣ

ದಲ್ಲಿಯೇ ಸಾಯುವೆನು. ಇದೇ ನನ್ನ ಪುಣ್ಯ ಸಂಕಲ್ಪವು ಬಿಡು! ಬಿಡು ನನ್ನನ್ನು. ಪುತ್ರನ ಕರ್ತವ್ಯದ ಮಾರ್ಗವನ್ನು ತಡೆಯುವುದು ವೀರ ಮಾತೆಯಾದ ನಿನಗೆ ಶೋಭಿಸುವುದಿಲ್ಲ. ಅಮ್ಮಾ, ನೀನು ವೀರಮಾತೆಯಲ್ಲವೇ? ಹಾಗಾದರೆ...

ರಾಗ ಬಾಗೇಶ್ರೀ, ತಾಳ ತ್ರಿವಿಟ

ಕೊಡುಯನಗಾಜ್ಞೆಯಾ । ಜನನಿ ತವ ॥ ಪಲ್ಲ ॥ ಬಿಡು ನೀ ಭಯವ ।
ನೀಡು ಅಭಯಾ ॥ ಅನುಪಲ್ಲ ॥ ಬಾಲನೆಂಬ ಮೋಹಾ ಬಿಡು ಮಾತೇ ।
ಬಾಲನಲ್ಲ । ರಿಪು ಕಾಲಾಂತಕನೆ ॥ ೧ ॥

**ಸುಭದ್ರಾ:—**ಕುಮಾರಾ ನಿನ್ನ ಕರ್ತವ್ಯಕ್ಕೆ ಸುಭದ್ರೆಯು ಅಡ್ಡವಾಗಿ ಬರುವುದಿಲ್ಲ. ಆದರೆ, ಅಂತಃಕರುಣದ ಮಾಯೆಯು ಅಡ್ಡಬರುವುದು ಮಗುವೆ, ನಿನ್ನ ತೇಜಸ್ವಿಯಾದ ಬಾಲಬುದ್ಧಿಯನ್ನು ಕೊಂಡಾಡಲೆ, ಅಥವಾ ಈ ಪ್ರಸಂಗವನ್ನು ನೋಡಿ, ನಿಷ್ಠುರಳಾಗಲೆ? ಹೋಗು, ಮಗುವೆ ಹೋಗು ಈ ವೀರಮಾತೆಯಾದ ಸುಭದ್ರೆಯು,ತನ್ನ ವೀರ ಕುಮಾರನ ಯಶೋಮಾರ್ಗವನ್ನು ನಿರ್ಬಂಧಿಸುವುದಿಲ್ಲ. ಹೋಗು ನಿನಗೆ ವಿಜಯವಾಗಲಿ.

ರಾಗ ಪೀಲು ತಾಳ ಕೇರವಾ

ಪೋಗು ಪರಾಕ್ರಮಿಯೆ । ಸಮರಕೇ ॥ ಮಗುವೇ ವಿಮಲ
ಕುಲಬಾಲರವಿಯೇ ॥ ಪಲ್ಲ ॥ ತೋರಿ ಶೌರ್ಯ । ವೈರಿ ನಿಕರವ ।
ನಾಶಗೊಳಿಸುತನಯಾ ॥ ಧರಾತಲದಿ ನೀ ಮಹಾನುಯಶವಾ
ನೈದು ಕುಲೋದ್ಧಾರಾ ॥ ೧ ॥

**ಅಭಿಮನ್ಯು:—**ಅಹಹ! ಅಮ್ಮಾ, ನಿನ್ನ ಶಬ್ದಗಳಿಂದ ನನ್ನ ಉತ್ಸಾಹವು ಉಕ್ಕೇರಿತು. ಕಕ್ಕಾ, ತಾಯಿಯ ಮಂಗಲಕರವಾದ ಆಶೀರ್ವಾದದ ಛತ್ರವು ನನಗೆ ಲಭಿಸಿತು. ಹೂ, ಇನ್ನು ನೀವು ಆಶೀರ್ವಾದವನ್ನು ಮಾಡಿರಿ. ತಂದೆಯವರು ಈ ಕಾಲಕ್ಕೆ ಇಲ್ಲಿ ಇಲ್ಲದಿದ್ದರೂ, ನೀವು ಮಾಡುವ ಆಶೀರ್ವಾದವೇ ಅವರದು. ತಮ್ಮ ಆಶೀರ್ವಾದದ ಬಲದಿಂದ ಶತ್ರುಗಳಿಗೆ ರಕ್ತಾಭಿಷೇಕವನ್ನು ಮಾಡುವುದಕ್ಕೆ ಹೊರಟೆನು. (ಧರ್ಮರಾಜನ ಕಾಲು ಹಿಡಿವ) ಸುಮ್ಮನೆ ಹೆಚ್ಚಾಗಿ ನನ್ನನ್ನು ತೊಂದರೆ ಪಡಿಸಬೇಡಿರಿ.

**ಧರ್ಮ:**—(ಸ್ವಗತ) ಈ ಸಮಯಕ್ಕೆ ನನಗೆ ಇಷ್ಟವಾವುದು ಅನಿಷ್ಟವಾವುದು—ಇದೇ ತಿಳಿಯದಂತಾಗಿದೆ. (ಪ್ರಕಟ) ಕುಮಾರಾ, ನಿನಗೆ ಅಖಂಡ ವಿಜಯವಾಗಲಿ ಭೀಮ-ನಕುಲ-ಸಹದೇವರೇ, ನೀವೂ ಇವನ ಜೊತೆಗೆ ಹೋಗಿರಿ. ಹೂ, ಬೇಗನೆ ಸಿದ್ಧತೆಯನ್ನು ಮಾಡಿರಿ.

**ಭೀಮ:**— ಅತ್ತಿಗೆ ನೀವು ತಿಲಮಾತ್ರವಾದರೂ ಯೋಚನೆ ಮಾಡಬೇಡಿರಿ. ಈ ಸಿಂಹದ ಮರಿಯ ಸಂರಕ್ಷಣೆಗಾಗಿ ಈ ಭೀಮನು ತನ್ನ ಅಖಂಡ ಸಾಮರ್ಥ್ಯವನ್ನು ವೆಚ್ಚ ಮಾಡುವನು.

**ಸುಭದ್ರಾ:**— ಕಂದಾ ಸ್ವಲ್ಪ ತಾಳು, ನಾನೊಮ್ಮೆ ನಿನ್ನ ನವಿಯಾದ ಮುದ್ದು ತಕ್ಕೊಳ್ಳುವೆನು.

**ಅಭಿಮನ್ಯು:**—ಅಮ್ಮಾ, ಇನ್ನು ಮೇಲೆ ನೀನು ಬೇಕಾದಷ್ಟು ಮುದ್ದು ತೆಗೆದುಕೋ. ಈ ದಿವಸ ಅಭಿಮನ್ಯುವು ಚಕ್ರವ್ಯೂಹವನ್ನು ಭೇದಿಸಿ, ತನ್ನ ಕೀರ್ತಿಯನ್ನು ಜಗತ್ತಿನಲ್ಲಿ ಪ್ರಕಾಶಗೊಳಿಸತಕ್ಕವನೇ ! ಅಮ್ಮಾ, ವೀರಶ್ರೀಯ ಮಂಗಲೋತ್ಸವದಿಂದ ವಿರಾಜಮಾನನಾದ ಈ ನಿನ್ನ ಮುದ್ದು ಕುಮಾರನು ನಿನಗೆ ಕೊನೆಯ ನಮನಗಳನ್ನು ಮಾಡುವನು. (ನಮಸ್ಕರಿಸುವನು) ಅಮ್ಮಾ ಬರುವೆನು. ಆಂ.

**ಸುಭದ್ರಾ:**—ಹೋಗು. ಮಗನೆ, ವಿಜಯಶಾಲಿಯಾಗು. ತುಸು ತಡೆ; ಮತ್ತೊಂದು ಸಲ ನಿನ್ನ ತುಟಿಯ ಜೊಲ್ಲನ್ನು ಯಥೇಚ್ಛವಾಗಿ (ಚುಂಬಿಸುವಳು) ಸೇವಿಸುತ್ತೇನೆ.

(ಹೋಗುವನು)

## ಪ್ರಥಮಾಂಕ ಸಂಪೂರ್ಣಂ

—●—



# ಎರಡನೆಯ ಅಂಕ

## ಒಂದನೆಯ ಪ್ರಸಂಗ

(ಉತ್ತರೆಯ ಮಂದಿರ. ಉತ್ತರೆಯು ಹಾರವನ್ನು ಕಟ್ಟುತ್ತಿರುವಳು ಸೌದಾ ಮಿನಿಯು ಹೂವುಗಳನ್ನು ಆಯ್ದು ಕೊಡುತ್ತಿರುವಳು.)

**ಉತ್ತರಾ :—** (ಬೇಸರದಿಂದ) ಸಾಕಾಯಿತಮ್ಮಾ, ಈ ಹಾರಪೋಣಿ ಸುವುದು.

**ಸೌದಾ :—** ಇದೇನು ದೇವಿ ಹೀಗೇಕೆ ಮಾಡುವಿರಿ ? ಇದೊಂದು ಹಾರವಾದರೂ ಪೂರ್ತಿಯಾಗಲಿ.

**ಉತ್ತರಾ :— ಸೌ**ದಾಮಿನಿ, ಏನು ಮಾಡಲಿ ನನಗೆ ಏನೂ ತಿಳಿಯ ದಾಗಿದೆ. ಏನೂ ರುಚಿಸದಾಗಿದೆ. ಅವರು ನನ್ನನ್ನು ತಿರಸ್ಕರಿಸಿ, ಹೋದರು. ಅದೇ ಸಮಯದಲ್ಲಿಯೆ ನನ್ನ ಎದೆಯೊಡೆದು ನೀರಾಯಿತು. ಸೌದಾಮಿನಿ, ಯುದ್ಧಕ್ಕೆ ಹೋಗಬೇಕೆನ್ನುವ ಅವರ ದೃಢವಾದ ನಿಶ್ಚಯವು ತಿರುಗಲಿಕ್ಕಿಲ್ಲವೇ? ನನ್ನ ಪ್ರೇಮದ ಪರಮೇಶ್ವರನು, ನನ್ನ ಕಡೆಗೆ ಮರಳಿ ನೋಡಲಿಕ್ಕಿಲ್ಲವೇ ? ಅವರ ವಿರಹತಾಪವನ್ನು ನಾನು ಸಹಿಸೆನು. ಅವರನ್ನು ಅಗಲಿ ಒಂದು ನಿಮಿಷ ಕಾಲಕಳೆಯುವುದು ಕೂಡ, ನನಗೆ ಮರಣಪ್ರಾಯವಾಗಿದೆ, ಅವಕ್ಕೋಸುಗ-

ರಾಗ ಪೀಲು, ತಾಳ ಧುಮಾಳಿ

ಪ್ರಾಣಪತಿಯ ವಿರಹತಾಪ । ತಾಳಲೆಂತು ನಾ ಸಖಿಯೇ ॥ ಪಲ್ಲ ॥
ಜಾಣೆ ಪೋಗಿ ಕಾಂತನೆಡೆಗೆ । ಕರೆದು ತಾರೆ ನೀ ॥
ಜಾಣ್ಮೆಯಿಂದ ಮನವನೊಲಿಸಿ । ಪೇಳು ಎನ್ನಯ ವ್ಯಥೆಯ ॥ ೧ ॥

**ಸೌದಾ .—** ಎಲ್ಲರೂ ನೇರಿ ಚಿಕ್ಕಮಹಾರಾಜರನ್ನು ಸಮಾಧಾನ ಪಡಿ ಸುವುದಕ್ಕೆ ಎಷ್ಟು ಪ್ರಯತ್ನಿಸಿದರೂ ಅದೆಲ್ಲವೂ ನಿಷ್ಫಲವಾಯಿತು. ಸ್ವಾಮಿಯ ಆಗಮನವಾದ ಕೂಡಲೆ, ಏನಾದರೊಂದು ಬಗೆಯಿಂದ ತಾವೇ—

**ಉತ್ತರಾ :— ಸೌ**ದಾಮಿನಿ, ನೀನೆಂತಹ ಹುಚ್ಚಿಯು ! ಸಮರಾಂಗ ಣಕ್ಕೆ ಹೋಗುವ ಮೊದಲು ಅವರು ನನ್ನನ್ನು ಕಾಣಬರುವರೋ ಇಲ್ಲವೋ ?

ಇದೇ ನನಗೆ ಸಂಶಯವಿದೆ. ಅವರ ಸ್ವಭಾವದ ರೀತಿಯು ನಿನಗೆ ತಿಳಿಯದು ನಾನು ಚೆನ್ನಾಗಿ ಬಲ್ಲೆನು

**ಸೌದಾ** :— ಚಿಕ್ಕಮಹಾರಾಜರು ತಮಗೆ ಭೆಟ್ಟಿಯಾಗದೆ ಹಾಗೇ ಸಮರಾಂಗಣಕ್ಕೆ ಎಂದೂ ಹೋಗಲಾರರು. ದೇವಿ, ಅದೋ ನೋಡಿ! ಮಲ್ಲಿಕೆಯು ಬಂದಳು. ಮಲ್ಲಿಕೆ—ಚಿಕ್ಕ ಮಹಾರಾಜರು, ಬಿಡಾರದಿಂದ ಯಾವ ಕಡೆಗೆ ಹೋದರು?

**ಮಲ್ಲಿಕಾ** :— ಅವರು ಬಿಡಾರದಿಂದ ಹೊರಬಿದ್ದವರು, ಮೊದಲು ಸಮರಾಂಗಣದ ಕಡೆಗೇ ತಮ್ಮ ಮುಖವನ್ನು ತಿರುಗಿಸಿದರು; ಆದರೆ ಅಷ್ಟರಲ್ಲಿ ಮತ್ತೇನು ನೆನಪಾಯಿತೋ ಕಾಣೆ, ಸ್ವಾರಿಯು ಇತ್ತ ಕಡೆಗೇ ತಿರುಗಿತು ಇಷ್ಟರಲ್ಲಿಯೇ ಬರಬಹುದು...

**ಉತ್ತರಾ** :— ( ಆನಂದದಿಂದ ) ಏನು ಹೇಳಿದೆ. ಪ್ರಾಣನಾಥರು ಇಷ್ಟರಲ್ಲಿಯೇ ಬರುವರೆ! ಅಹಹಾ! ನನ್ನ ಭಾಗ್ಯಸೂರ್ಯನು ಉದಯವಾದನು. ಈ ಆನಂದದ ವರ್ತಮಾನವನ್ನು ತಿಳಿಸಿದ ಬಗ್ಗೆ, ಇದೋ ತೆಗೆದುಕೋ ನಿನಗೆ ಬಹುಮಾನವನ್ನು, ( ಮುತ್ತಿನ ಹಾರವನ್ನು ಕೊಡುವಳು ) ಸೌದಾಮಿನಿ, ಇನ್ನು ಈ ಹಾರವನ್ನು ನಾನು ಜಾಗ್ರತೆಯಾಗಿ ಪೂರೈಸುವೆನು. ನೀನು ಬೇಗನೆ ಹೋಗಿ ಪುಷ್ಪಗಳನ್ನು ತೆಗೆದುಕೊಂಡು ಬಾ, ( ಸೌದಾಮಿನಿ ಹೊರಡುವಳು) ಏನೇ—ಏ ಇಲ್ಲಿ ಬಾ, ಒಳ್ಳೇ ಸುಗಂಧವಾದ ಪುಷ್ಪಗಳನ್ನು ತೆಗೆದುಕೊಂಡು ಬಾ—ಆಂ—ಹೂಂ ಹೋಗು ಬೇಗನೆ. ಇದೋ ಕೇಳು—ಏನು ಹೇಳತಕ್ಕವಳಿದ್ದೆ ನಿನಗೇ ? ಸರಿ—ಏನೂ ಇಲ್ಲಾ—ಜಾಗ್ರತೆಯಾಗಿ ಬಾ— ( ಸೌದಾಮಿನಿಯು ಹೊರಡುವಳು, ಏನೆ ಇದೋ ನೆನಪಾಯಿತು. ಆ ತಾಂಬೂಲ ತಟ್ಟೆಯನ್ನು ಮರೆತು ಬರಬೇಡ. ಹೂಂ ಹೋಗು ಬೇಗನೆ ( ಸೌದಾಮಿನಿ ಹೋಗುವಳು.) (ಹಾರವನ್ನು ಕೈಯಲ್ಲಿ ತೆಗೆದುಕೊಂಡು ) ಎಲೈ ಹಾರವೇ, ನನ್ನ ಪ್ರಾಣೇಶನನ್ನು ಈ ನನ್ನ ಮಂದಿರದಲ್ಲಿ ತಡೆದು ನಿಲ್ಲಿಸುವುದಕ್ಕೆ ನನಗೆ ಸಹಾಯ ಮಾಡುವಿಯಾ ? ಮಲ್ಲಿಕೆ, ನೀನು ಹೋಗು—ಪ್ರಾಣನಾಥರು ಮಂದಿರದಲ್ಲಿ ಪ್ರವೇಶ ಮಾಡಿದ ಕೂಡಲೆ ನನಗೆ ಬಂದು ತಿಳಿಸು—( ಉತ್ತರೆಯು ಹಾರ ಪೋಣಿಸುವದಕ್ಕೆ ಪ್ರಾರಂಭಿಸುವಳು.)

**ಮಲ್ಲಿಕಾ** :— ( ಹೋಗುವಾಗ್ಗೆ ಮುಂದೆ ನೋಡಿ, ಸ್ವಗತ ) ಅಮ್ಮಯ್ಯಾ, ಚಿಕ್ಕ ಮಹಾರಾಜರು ಬಂದೇ ಬಿಟ್ಟರು.

**ಅಭಿಮನ್ಯು** .— (ರಣವೇಷದಿಂದ ಪ್ರವೇಶಮಾಡುವನು) ಏಲೈ ಪ್ರೇಮದ ದೇವದೇವನೆ,--ತರುಣ ಜೀವಿಗಳ ಮೇಲೆ ನಿನ್ನ ಅಧಿಕಾರವನ್ನು ಎಷ್ಟು ಬಲವಾಗಿ ನಡಿಸುವೆ.—ಕರ್ತವ್ಯದ ಕಠೋರ ಮನಸ್ಸಿನಿಂದ ರಣಭೂಮಿಯ ಕಡೆಗೆ ಚಲಿಸಿದ ನನ್ನ ಪಾದಗಳು ಈ ಪ್ರೇಮಪಾಶಕ್ಕೆ ಸೋತು, ಹಿಂತಿರುಗಿದವು. ಪ್ರಿಯಕರನನ್ನು ಪ್ರೇಮಪಾಶದಿಂದ ಕಟ್ಟುವುದಕ್ಕೆ ಸಿದ್ಧಳಾದ ನನ್ನ ಮುದ್ದಿನ ಪ್ರಿಯರಮಣಿಯೆ,—

**ಉತ್ತರಾ** :— ಅಮ್ಮಯ್ಯಾ, ಯಾರದು ? ನನ್ನ ಪ್ರಾಣನಾಥರು. ಸ್ವಾಮಿಯು ಖಂಡಿತವಾಗಿ ಬರುವರೆಂದು ನಾನು ಮೊದಲೇ ತಿಳಿದಿದ್ದೆನು. ಅದಕ್ಕೋಸುಗವೇ, ನಾನೀ ಹಾರವನ್ನು, ಜಾಗ್ರತೆಯಾಗಿ ಮುಗಿಸುವ ಯೋಚನೆಯಲ್ಲಿದ್ದೆನು.

**ಅಭಿಮನ್ಯು** : — ಈ ಹಾರವನ್ನು ಹೀಗೆಯೇ ಅರ್ಧಕ್ಕೆ ನಾಕುಮಾಡಿ ( ಹಾರತಕ್ಕೊಂಡು)

**ಉತ್ತರಾ** :— ಅಮ್ಮಯ್ಯ. ಇದೇನು, ಹುಡುಗಾಟಿ ? ನನ್ನ ಪ್ರೇಮದ ಹಾರವು ಪೂರ್ಣವಾಗಬಾರದೆಂದು ತಮ್ಮ ಇಚ್ಛೆ ಇರುವುದೇ ಹೇಗೆ ?

**ಅಭಿಮನ್ಯು** :— ನನ್ನ ಇಚ್ಛೆಯಲ್ಲ, ಭವಿತವ್ಯತೆಯ ಇಚ್ಛೆಯೇ ಕಠೋರವಾಗಿದ್ದರೆ ಅದಕ್ಕೆ ನೀನೇನು ಮಾಡುವೆ ?

**ಉತ್ತರಾ**:— ಅದೇನೆ ಇರಲಿ, ನಾನು ಈ ಹಾರವನ್ನು ಪೂರೈಸತಕ್ಕವಳೇ ಸರಿ. (ಹಾರವನ್ನು ತಕ್ಕೊಳ್ಳಲಿಕ್ಕೆ ಪ್ರಯತ್ನಿಸುವಳು.) ಅಮ್ಮಯ್ಯ, ಇದೆಂಥ ಒರಟುತನವು. ಕೋಮಲವಾದ ಮೊಗ್ಗೆಗಳು ಬತ್ತಿ ಬಾಡಿ ಹೋಗಲಿಕ್ಕಿಲ್ಲವೆ ?

**ಅಭಿಮನ್ಯು** :— ಮೊದಲು ಈ ಸುಂದರವಾದ ಕಮಲದ ಅರಳು ಮೊಗ್ಗೆಯನ್ನು ಚುಂಬಿಸೋಣ; ಆಮೇಲೆ ಆ ಮೊಗ್ಗೆಗಳ ವಿಚಾರವು. (ಚುಂಬಿಸುವನು)

**ಉತ್ತರಾ** :— ಇದೆಂತಹ ಪರಿಹಾಸ್ಯವು. ಅದಕ್ಕೇನು ಸಮಯವಿಲ್ಲವೇ ? ಆದರೆ ನಾಥಾ. ತಾವು ಕ್ಷಣಹೊತ್ತು ಈ ಮಂಚದ ಮೇಲೆ ವಿಶ್ರಾಂತಿಯನ್ನು ಹೊಂದಿದರೆ-ನಾನು ಈಗಲೇ ಹಾರವನ್ನು ಪೂರ್ತಿಸುವೆನು.

**ಅಭಿಮನ್ಯು** :— ನನಗೆ ಈ ಮಂಚದ ಮೇಲೆ ಕೂಡುವದಕ್ಕೆ ಸಮಯವಿಲ್ಲ. ಅಲ್ಲದೆ ನಿನ್ನ ಈ ಹೃದಯ ಮಂಚದಲ್ಲಿ ನನಗೆ ಸ್ಥಿರವಾದ ಅಧಿಷ್ಠಾನವು ದೊರೆತಿರುವುದಲ್ಲವೆ ? ರಣಮಂಚದ ಮೇಲೆ ಕುಳಿತು ಶೌರ್ಯತನದ

ಶೃಂಗಾರ ವಿಲಾಸಗಳ ಹಾಡುಗಳನ್ನು ಹಾಡುತ್ತ, ವಿಜಯ ಶಾಲಿಯಾಗಿ ಬಂದ ವೀರ ಪುರುಷರಿಗೆ ಇಂತಹ ಮಂಗಲಕರವಾದ ಪುಷ್ಪಮಾಲೆಯನ್ನು ರಮಣಿಯು ಅರ್ಪಿಸಿದರೆ ಅದು ಭೂಷಣವು. ಕೊಡು, ನನಗೆ ಹೋಗುವದಕ್ಕೆ ಆನಂದ ದಿಂದ ಒಪ್ಪಿಗೆಯನ್ನು ಕೊಡು—ನಾನು ನಿನ್ನ—

**ಉತ್ತರಾ :**— ಬೇಡ ಬೇಡ ನಾಥಾ, ಇಂತಹ ಕಠೋರ ಶಬ್ದಗಳನ್ನು ನಾನು ಕೇಳಲಾರೆನು; ಸಹಿಸಲಾರೆನು

**ಅಭಿಮನ್ಯು :**— ಪ್ರಿಯೆ, ಪ್ರಸನ್ನ ಮನಸ್ಸಿನಿಂದ ನನಗೆ ಅಪ್ಪಣೆಯನ್ನು ಕೊಟ್ಟು, ನನ್ನ ರಣೋತ್ಸಾಹವನ್ನು ವೃದ್ಧಿಗೊಳಿಸದೆ, ನನ್ನನ್ನು ನಿರುತ್ಸಾಹಿ ಯನ್ನಾಗಿ ಮಾಡುವಿಯಾ ? ಹುಚ್ಚಿ, ಒರಿಸು, ಅಶ್ರುಗಳನ್ನು ಒರಿಸು ಹಸನ್ ಮುಖದಿಂದ ಒಂದು ಸಲ ನನ್ನ ಕಡೆಗೆ ನೋಡಿಯಾದರೂ ನೋಡು

**ಉತ್ತರಾ :**-- ನಾಥಾ, ಏನು ಮಾಡಲಿ ? ದುಃಖದಿಂದ ಒತ್ತರಿಸುವ ಅಶ್ರುಗಳನ್ನು ತಡೆಯುವುದು ನನ್ನಿಂದ ಸಾಧ್ಯವೇ ?

**ಅಭಿಮನ್ಯು .**— ಉತ್ತರೆ, ರಮಣಿಯರ ನೇತ್ರಗಳು ಆನಂದಾಶ್ರು ಗಳಿಂದ ತುಂಬಿದರೆ, ವೀರಪುರುಷರ ಅಂಗದಲ್ಲಿ ಪರಾಕ್ರಮದ ರಕ್ತವು ಕುದಿಯು ಲಿಕ್ಕೆ ಹತ್ತುವದು ಆದರೆ ಇಂತಹ ದುಃಖಕರವಾದ ಅಶ್ರುಗಳಿಂದ ವೀರರ ವೀರವೃತ್ತಿಯು ನಿರ್ವೀರ್ಯವಾಗಿ ಹೋಗುವದು. ನನಗೆ ಜಾಗ್ರತೆಯಾಗಿ ಅನುಮತಿಯನ್ನು ಕೊಡು.

**ಉತ್ತರಾ :**— ನಾಥಾ, ಏನು ಮಾಡಲಿ ! ನನ್ನ ಮನಸ್ಸಿನಲ್ಲಿಯ ವಿಚಾರಗಳು ಮನಸ್ಸಿನಲ್ಲಿಯೇ ಇಂಗಿ ಹೋದವು. ಮುಖದಿಂದ ಒಂದು ಶಬ್ದವೂ ಕೂಡ ಉಚ್ಚರಿಸಲಿಕ್ಕೆ ಬರದಂತಾಯಿತು (ವಕ್ಷಸ್ಥಳದಲ್ಲಿ ತಲೆಯನ್ನು ಒರಗಿಸುವಳು.)

**ಅಭಿಮನ್ಯು :**— ಬಾ, ಬಾ, ನನ್ನ ಮುದ್ದು ಜೀವವೇ, ಹೃದಯಕ್ಕೆ ಹೃದಯವು ಹೊಂದಲಿ. ಪ್ರಣಯರಂಗದಲ್ಲಿ ಮನಸ್ಸು ರಮಿಸಲಿ, ಪ್ರತಿಯೊಂದು ರಕ್ತವಾಹಿನಿಗಳಲ್ಲಿ ವೀರಶ್ರೀಯು ಉಕ್ಕೇರಿದರೂ, ಅಂತಃಕರಣದ ಪ್ರದೇಶದಲ್ಲಿ ಪ್ರೇಮದ ಮಧುರ ಸಂಗೀತವು ಸುಳಿದಾಡುತ್ತಿರುವುದು. ಬಾ. ಬಾ. ನಿನ್ನ ಈ ವಿಶಾಲವಾದ ಭಾಲದರ್ಪಣದಲ್ಲಿ ನನ್ನ ಭಾಗ್ಯೋದಯದ ಪ್ರತಿಬಿಂಬವನ್ನು ನೋಡುತ್ತೇನೆ. ( ಉತ್ತರೆಯನ್ನು ಅಪ್ಪಿಕೊಳ್ಳುವನು.)

**ಉತ್ತರಾ**:—ಇದೇನು ನನ್ನ ಕುಂಕುಮ ತಿಲಕವು ಒರಿಸಿಹೋಯಿತು? (ತೆರೆಯಲ್ಲಿ ರಣದುಂದುಭಿ ಮೊಳಗುವದು.)

**ಅಭಿಮನ್ಯು** :— ಕೇಳು, ರಣದುಂದುಭಿಯ ಧ್ವನಿಯನ್ನು ಕೇಳು. ಯುದ್ಧಕ್ಕೆ ಹೊರಡುವ ಸಮಯವು ತೀರಾ ಸಮೀಪಿಸಿತು. ಪ್ರಿಯೆ, ನಾನಿನ್ನು ಜಾಗ್ರತೆಯಾಗಿ ಹೋಗಲೇ ಬೇಕು. ( ಉತ್ತರೆಯನ್ನು ದೂರ ಸರಿಸುವನು.)

**ಉತ್ತರಾ** :— ಹಾಗಾದರೆ ಯುದ್ಧಕ್ಕೆ ಹೊರಡುವ ಪ್ರಸಂಗವು ತಮ್ಮ ಮೇಲೆಯೆ ಬಂದಿತೆ ?

**ಅಭಿಮನ್ಯು** .— ನಿನಗೆ ಈ ವಿಷಯವನ್ನು ಎಷ್ಟು ಹೇಳಿದರೂ ತಿಳಿಯದು. ತ್ರಿಗರ್ತರಾಜನು ಅತ್ತ ಕಡೆ ತನ್ನ ಐದು ಜನ ಬಾಂಧವರ ಸಹಾಯದಿಂದ ನಮ್ಮ ಮೇಲೆ ಸಾಗಿಬಂದಿರುವನು. ಮತ್ತು ಇತ್ತ ಕಡೆಗೆ ದ್ರೋಣಾಚಾರ್ಯರು ಚಕ್ರವ್ಯೂಹವನ್ನು ರಚಿಸಿರುವರು. ಚಕ್ರವ್ಯೂಹವನ್ನು ಭೇದಿಸುವ ವಿದ್ಯೆಯನ್ನು ಶ್ರೀಕೃಷ್ಣನು, ಪ್ರದ್ಯುಮ್ನನು, ನನ್ನ ತಂದೆಯು ಮತ್ತು ನಾನು, ಈ ನಾಲ್ವರೇ ಬಲ್ಲೆವು. ಅದರೆ ಶ್ರೀಕೃಷ್ಣನೂ ನನ್ನ ತಂದೆಯೂ ಸಂಶಪ್ತಕರ ಕೂಡ ಯುದ್ಧಕ್ಕೆ ಹೋಗಿರುತ್ತಾರೆ; ಎಂದಮೇಲೆ ಚಕ್ರವ್ಯೂಹವನ್ನು ಭೇದಿಸಿ ಸ್ವಜನರ ಸಂಕಟವನ್ನು ನಿವಾರಿಸುವ ಕರ್ತವ್ಯವನ್ನು ನಾನಲ್ಲದೆ ಮತ್ತಾರು ಮಾಡಲು ಸಮರ್ಥರಿರುವರು ? ಅದಕ್ಕಾಗಿನಾನು ಯುದ್ಧಕ್ಕೆಹೋಗಲೇಬೇಕು.

**ಉತ್ತರಾ** :— ಸರಿ ಹಾಗಾದರೆ, ತಾವು ಯುದ್ಧಕ್ಕೆ ಹೋಗುವುದಾದರೆ ನನ್ನನ್ನೂ ಕರೆದುಕೊಂಡು ನಡೆಯಿರಿ.

**ಅಭಿಮನ್ಯು**:— ನಿನ್ನನ್ನೂ ಜೊತೆಗೆ ಕರೆದುಕೊಂಡು ಹೋಗುವುದು, ನಿನ್ನ ಮನಸ್ಸಿಗಾದರೂ ಯೋಗ್ಯವೆನಿಸುವುದೇ ?

**ಉತ್ತರಾ** :— ಹೌದು, ನಾನೂ ತಮ್ಮ ಜೊತೆಗೆ ಬರತಕ್ಕವಳೇ. ನಾಥಾ, ಬೇಡ ಬೇಡ, ಈ ದೀನ ದಾಸಿಯನ್ನು ದುಃಖಸಾಗರದಲ್ಲಿ ನೂಕಿ, ಹೋಗಬೇಡಿರಿ.

ರಾಗ ಬೇಹಾಗ, ತಾಳ ದಾದರಾ

ಪ್ರಿಯನಾಥಾ । ನಿರಾಕರಿಸಿ । ಪೋಗಬೇಡಾ ॥ ಪಲ್ಲ ॥
ದಯವಂತಾ । ವಿರಹವ್ಯಥೆ । ತಾಳಲಾರೆ॥ ಭಯದೂರ ।
ಸುವಂಶವರ । ಸಮರಧೀರ ॥ ೧ ॥

(ತೆಕ್ಕೆ ಬೀಳುವಳು. ತೆರೆಯಲ್ಲಿ ದುಂದುಭಿ ಧ್ವನಿಯಾಗುವುದು.)

**ಅಭಿಮನ್ಯು** :— (ಸ್ವಗತ) ಏನು ಮಾಡಲಿ ? ಪ್ರೇಮವು-ಮತ್ತು

ಕರ್ತವ್ಯವು—ಇವೆರಡರ ಮಧ್ಯದಲ್ಲಿ ಸಿಕ್ಕು ವೇಚಾಡುತ್ತಿರುವೆನು. ಛೀ— ಕರ್ತವ್ಯಕ್ಕಾಗಿ ನಾನು ಈ ಪ್ರೇಮಪಾಶವನ್ನು ಹರಿದು ಬಿಸಾಡಲೇಬೇಕು. ಹೃದಯವೇ, ಪ್ರೇಮಕ್ಕೆ ವಶವಾಗಬೇಡ. ಕರ್ತವ್ಯಕ್ಕಾಗಿ ಕಠೋರ ವಾಗು. (ಉತ್ತರೆಯನ್ನು ದೂರ ಸರಿಸಿ) ಉತ್ತರೆ, ವೀರಪತ್ನಿಯಾದ ನಿನಗೆ, ಇದು ಭೂಷಣವೇ ? ವಿಚಾರಮಾಡು, ಈ ದಿವಸದ ಯುದ್ಧದ ಧಾರಾತೀರ್ಥದಲ್ಲಿ ದೇಹವನ್ನು ಬಿಟ್ಟು ವೀರ ಸ್ವರ್ಗವನ್ನು ಪಡೆಯುವ ಭಾಗ್ಯವು ನನಗೆ ಲಭಿಸಿ ದರೆ—

**ಉತ್ತರಾ** :— ಬೇಡ ಬೇಡ ಮಹಾರಾಜ, ನಿಮಗೆ ನನ್ನ ಕೊರಳಾಣೆ ಯಿದೆ. ಇಂತಹ ಅಮಂಗಲ ಮಾತುಗಳನ್ನು ಉಚ್ಚರಿಸಬೇಡಿರಿ.

**ಅಭಿಮನ್ಯು** :— ಪ್ರಿಯೆ, ನಾನು ನಿನ್ನ ಕೊರಳು ಸಾಕ್ಷಿಯಾಗಿ ಹೇಳು ವೆನು. (ಕುತ್ತಿಗೆಯ ಮೇಲೆ ಕೈ ಇರಿಸುವನು. ಮಂಗಳಸೂತ್ರವು ಹರಿದುಬೀಳುವದು.)

**ಉತ್ತರಾ** :— ಅಮ್ಮಯ್ಯಾ, ಇದೇನು ಅಪಶಕುನವು ? ಮಂಗಲ ಸೂತ್ರವು ಹರಿಯಿತು ! ಪ್ರಿಯಕರಾ ಇನ್ನುಮೇಲೆ ಒಂದು ನಿಮಿಷ ಕೂಡ, ತಮ್ಮ ವಿಯೋಗ ದುಃಖವನ್ನು ಸಹಿಸಲಾರೆನು ನನ್ನ ಮನಸ್ಸಿನಲ್ಲಿ ನಾನಾ ತರದ ವಿಚಾರಗಳು ಬರುತ್ತಿರುವವು.

**ಅಭಿಮನ್ಯು** :— ( ಸ್ವಗತ ) ಇನ್ನುಮೇಲೆ ಇಲ್ಲಿಂದ ಬೇಗನೆ ಕಾಲು ಕಿತ್ತಲೇಬೇಕು. (ಪ್ರ) ಉತ್ತರೆ. ಇದೋ ನಾನು ಹೊರಟೆನು. ಒಂದು ಸಲ ಮುಗುಳು ನಗೆಯಿಂದ ನಕ್ಕು, ಹೋಗುವುದಕ್ಕೆ ಅಪ್ಪಣೆಯನ್ನು ಕೊಡು ನೋಡುವಾ.

**ಉತ್ತರಾ** :— ತುದಿನಾಲಿಗೆಯ ಮೇಲೆ ಸುಳಿದಾಡುವಂಥ 'ಹೋಗು' ಎಂಬ ಶಬ್ದವು ಹೊರಗೆ ಬಾರದೆ ಅಲ್ಲಿಯೇ ಕುಣಿಯುತ್ತಿರುವುದು. ಹೋಗು, ಪರಾಕ್ರಮಿಯಾದ ನರವೀರನೇ ಹೋಗು. ವೀರ ಪುತ್ರಿಯು ವೀರ ಪತ್ನಿಯು ಆದ ಉತ್ತರೆಯು ನಿಮಗೆ ನಿಮ್ಮ ಕರ್ತವ್ಯಕ್ಕೋಸುಗ ಹೋಗುವುದಕ್ಕೆ ಆನಂದದಿಂದ ನಿರೋಪಕೊಟ್ಟಿರುವಳು.

**ಅಭಿಮನ್ಯು** :— ಅಹಹಾ ! ಉತ್ತರೆ ನೀನು ಧನ್ಯಳು ಧನ್ಯಳು, ನಿಜ ವಾದ ವೀರಾಂಗನೆಯು. ಆರ್ಯಲಲನಾಮಣಿಯೆಂಬ ನಾಮವು ನಿನಗೆ ಶೋಭಿಸುವುದು. ಒಳ್ಳೇದು ನಾನು ಇನ್ನು ಬರಲೆ ? (ಹೋಗತೊಡಗುವನು)

**ಉತ್ತರಾ.**— ನಾಥಾ, ಸ್ವಲ್ಪ ತಡೆಯಿರಿ. ಈ ತಮ್ಮ ಸುಕುಮಾರ ದೇಹಕ್ಕೆ ಸ್ವಲ್ಪು ಗಂಧವನ್ನು ಲೇಪಿಸುತ್ತೇನೆ.

**ಅಭಿಮನ್ಯು** :— ಪ್ರಿಯೆ, ಆ ಪಂಚಾರತಿಯಲ್ಲಾದರೂ ವಿಶೇಷ ವೇನೀದೆ ? ಅಖಂಡವಾಗಿ ಸ್ನೇಹಭರಿತವಾದ ಈ ನೇತ್ರ ನೀರಾಂಜನಗಳಿಂದ ನೀನು ನನಗೆ ದಿನಾಲು ಆರತಿಯನ್ನು ಮಾಡುತ್ತಿರುವೆಯಲ್ಲವೆ? ಅದೇ ಸಾಕು. ನನಗೆ ಪಂಚಾರತಿ ಬೇಡ.

**ಉತ್ತರಾ** :— ಅದೇನು ಇಲ್ಲ. ನಾನು ತನುಗೆ ಪಂಚಾರತಿಯನ್ನು ಬೆಳಗಿಯೇ ತಮ್ಮನ್ನು ಕಳುಹುವೆನು.

(ದಾಸಿಯರು ಆರತಿಯನ್ನು ತರುವರು. ಉತ್ತರೆಯು ಅಭಿಮನ್ಯುವಿಗೆ ಬೆಳಗುವಳು)

**ಅಭಿಮನ್ಯು**: — ನಾನು ಇನ್ನು ಬರುವೆನು (ಹೋಗುವಾಗ ಅಭಿಮನ್ಯು ವಿನ ಖಡ್ಗವು ಆರತಿಗೆ ತಗಲಿ ಅದು ಕೆಳಗೆ ಬಿದ್ದು ನೊಂದುವುದು.)

**ಉತ್ತರಾ** :— ಹಾಯ್ ಹಾಯ್ ದೈವವೇ; ಅಪಶಕುನಗಳು ಮಿತಿ ಮೀರಿದವು. ನಾಥಾ, ನಾಥಾ--

**ಅಭಿಮನ್ಯು** :— ಧೀರನಾದ ವೀರ ಪುರುಷನು, ಶಕುನಾಪಶಕುನ ಗಳನ್ನು ಲಕ್ಷಿಸುವುದು, ಹೇಡಿತನದ ಕೆಲಸವಾಗಿದೆ. ( ಹಿಂತಿರುಗಿ ನೋಡಿ ಹೊರಟು ಹೋಗುವಾಗ ಉತ್ತರೆಯು 'ಹಾ ದೈವವೇ' ಎಂದು ಮೂರ್ಛೆಬೀಳುವಳು)

## ಎರಡನೆಯ ಪ್ರಸಂಗ

ಸ್ಥಳ : ರಣರಂಗದ ರಸ್ತೆ. (ಮೇಘನಾದನು ಪ್ರವೇಶಿಸುವನು)

**ಮೇಘ** :— ಬ್ರಹ್ಮಚರ್ಯದಿಂದ ಇರು. ಏನಾದರೂ ಮಾಡು-ಬ್ರಹ್ಮ ಚರ್ಯದಿಂದ- ಆಜನ್ಮ ಬ್ರಹ್ಮಚರ್ಯದಿಂದ ಇರು. ಆಮೇಲೆ ಬ್ರಹ್ಮಚಾರಿ ಯಾದ ಭೀಷ್ಮರಂತೆ, ಶರಪಂಜರದ ಮೇಲೆ—ಇಲ್ಲವೇ ಪ್ರಖರವಾದ ಅಗ್ನಿ ಯಲ್ಲಿ ಹುರುಪಳಿಸಿ, ಮಹಾ ಕಷ್ಟದಿಂದ ಮರಣ ಬಂದರೂ ಚಿಂತೆಯಿಲ್ಲ. ಜಗ ತ್ತಿನ ಪೇಟೆಯಲ್ಲಿ ಬ್ರಹ್ಮಚಾರಿಗಳ ಸಂಖ್ಯೆಯು ಹೆಚ್ಚುತ್ತಹೋದರೆ, ಪುರುಷರ ಬೆಲೆಯು ಮಿತಿಮೀರಿ, ಈ ಹೆಂಗಸರ ಡೌಲು—ಅಹಂಕಾರವು ತನ್ನಷ್ಟಕ್ಕೆ

ತಾನೇ ಇಳಿದು ಹೋಗುವುದು. ಈ ಸ್ತ್ರೀಯರಿಗೆ ಜೀವಂತವಾಗಿರಲು ಸ್ವರ್ಗವು ಕಾಣಿಸಬಹುದು. ಆದರೆ ಲಗ್ನಕ್ಕೋಸುಗ ಒಬ್ಬ ಪತಿಯು ಕೂಡ ಕಾಣಿಸ ಬಾರದು. ಇಂತಹ ಸ್ಥಿತಿಯಾಗಬೇಕು! ಸ್ತ್ರೀಯರಿಗೆ ಗಂಡಸೆಂದರೆ ಮೋಕ್ಷ ಕ್ಕಿಂತಲೂ ದುರ್ಮಿಳವಾಗಬೇಕು; ಎಂದರೆ ಒಳ್ಳೇ ಚಮತ್ಕಾರವಾಗುವದು. ಈ ಸ್ತ್ರೀಯರು ತಮ್ಮ ಪತಿಗಳನ್ನು ಕವಲೆಬಸವಣ್ಣನಂತೆ ತಿಳಿದು ಅವರನ್ನು ಸಂಸಾರದ ಬಂಡಿಗೆಹೂಡಿ, ಬೇಕಾದಹಾಗೆ ಕುಣಿಸುತ್ತಾರೆ, ಗಂಡನ ಲಗಾಮು ತಮ್ಮ ಕೈಯಲ್ಲಿ, ತಮಗೆ ಮಾತ್ರ ಅನಿರ್ಬಂಧ! ಧಿಕ್ಕಾರ ಧಿಕ್ಕಾರವಿರಲಿ ಈ ಸ್ತ್ರೀಯರಿಗೆ! ತಾತ್ಪರ್ಯವೇನೆಂದರೆ ಲಗ್ನದಲ್ಲಿ ಏನೂ ಸ್ವಾರಸ್ಯವಿಲ್ಲ; ಮತ್ತು ಸಂಸಾರದಲ್ಲಿ ಅರ್ಥವಿಲ್ಲದಿದ್ದರೂ, ಅನರ್ಥವು ಸಂಪೂರ್ಣವಾಗಿದೆ. ನಾನು ಸ್ವಾನುಭವದಿಂದ ಹೇಳುತ್ತೇನೆ. ನಿಶ್ಚಯವಾಗಿಯೂ ಪರಿಹಾಸ್ಯ ಮಾಡುವು ದಿಲ್ಲ. ಏಕಾಂಗಿಯಾಗಿ ನೋಟಭಯಿಯಂತೆ ಆಯುಷ್ಯ ಪ್ರವಾಸವನ್ನು ಕಳೆಯ ಬೇಕಲ್ಲದೆ, ಈ ಲಗ್ನವೆಂಬ ಕಬ್ಬಿಣದ ಬೇಡಿಯನ್ನು ಕಾಲಿನಲ್ಲಿ ತೊಡರಿಸಿ ಕೊಂಡು, ಸಂಸಾರವ ಕೊಂಡವಾಡೆಯಲ್ಲಿ ಹೆಂಡತಿಯ ಗುಲಾಮನಾಗಿರುವುದು ಸರ್ವಥಾ ಬೇಡ. ಜಗತ್ತಿನಲ್ಲಿ ಬೇಕಾದಂತಹ ಪಾಪವನ್ನು ಮಾಡಬಹುದು; ಆದರೆ ಈ ಲಗ್ನದ ಪಾಪವನ್ನು ಮಾಡಿ, ಈ ಹೆಂಡತಿಯೆಂಬ ಬ್ರಹ್ಮಪಿಶಾಚಿ ಯನ್ನು ಬೆನ್ನಿಗೆ ಕಟ್ಟಿಕೊಳ್ಳಬಾರದಪ್ಪಾ! ಪ್ರಾಣಿಯು ಹೇಗೆ ಬಂದನೋ— ಹಾಗೇ ಹೋದನು, ಈ ತತ್ವವು ನಿಜವಾಗಬೇಕು. ಬ್ರಹ್ಮಚಾರಿಯಾಗಿ ಜನ್ಮಕ್ಕೆ ಬಂದವನು; ಬ್ರಹ್ಮಚಾರಿಯಾಗಿಯೇ ಸತ್ತು ಹೋಗಬೇಕು ಆದರೆ— ಇದೋ ಈ ನಮ್ಮ ಗೃಹಲಕ್ಷ್ಮಿಯು—ಛೇ—ನಮ್ಮ ಜೇಷ್ಠಾಲಕ್ಷ್ಮಿಯು ಇತ್ತ ಕಡೆಗೇ ಬಂದಳು.

**ಸೌದಾ** :—( ಪ್ರವೇಶಮಾಡಿ ) ಏಕೆ ನೀವು ಇನ್ನೂ ಇಲ್ಲೇ ಒದ್ದಾಡು ತ್ತಿರುವಿರಿ ?

**ಮೋಘ** :— ಸಂಸಾರ ಸಮುದ್ರದಲ್ಲಿ ಪೆಟ್ಟು ತಿಂದು—ತಿಂದು, ನಾನೇ ಏಕೆ— ನನ್ನ ಪ್ರಾಣವೂ ಒದ್ದಾಡುತ್ತಿರುವುದು.

**ಸೌದಾ** :— ಓಹೋ. ಸರಿ ತಿಳಿಯಿತು. ಯುದ್ಧಕ್ಕೆ ಹೋಗಬೇಕಾ ಗುವುದೆಂದು ಏನಾದರೂ ರಕ್ಷಿತನವನ್ನು ಮಾಡಿ, ತಪ್ಪಿಸುವ ವಿಚಾರವಿದ್ದಂತೆ ಕಾಣುವುದು. ಅದೇನೂ ಇಲ್ಲ ಇನ್ನುಮೇಲೆ ನಿಮ್ಮ ಲಗ್ನವು ಯುದ್ಧ ದಲ್ಲಿಯೇ ಆಗಲಿ.

**ಮೋಘ** :— ಏನೇ ಲಗ್ನವೆಂದರೇನು? ಯುದ್ಧವೇ ! ಲಗ್ನಮಾಡಿಕೊಂಡು ನಿನ್ನನ್ನು ಬೆನ್ನಿಗೆಕಟ್ಟಿಕೊಂಡಾಗಲೇ ಯುದ್ಧಕ್ಕೆ ಪ್ರಾರಂಭವಾಯಿತು. ಪರಮೇಶ್ವರಾ ! ನನಗೆ ಬೋರ್ಜಗಲಿಯ ಮೇಲೆಯಾದರೂ, ಆ ಜನ್ಮ ಬ್ರಹ್ಮಚಾರಿಯಾಗಿರಬೇಕೆಂಬ ಬುದ್ಧಿಯನ್ನು ಕೊಟ್ಟಿದ್ದರೆ ಎಷ್ಟು ಒಳ್ಳೇದಾಗುತ್ತಿತ್ತು!

**ಸೌದಾ** :— ಸಾಕು, ಸಾಕು, ನಿಮ್ಮಂಥ ದುಗ್ಗಾಣಿ ಬ್ರಹ್ಮಚಾರಿಗಳನ್ನು ನಾನು ಬೇಕಾದಷ್ಟು ನೋಡಿರುವೆನು. ಬ್ರಹ್ಮಚಾರಿಯೆಂದು ಇಲ್ಲಿ ಮೆರೆಯುವುದು ಅತ್ತ ಕಡೆಗೆ—

**ಮೋಘ** :— ಸಾಕು, ಸಾಕು, ಎಲ್ಲವೂ ಗೊತ್ತಾಯಿತು. ಲಗ್ನದ ಹೆಂಡತಿಯೊಡನೆ ಸಂಸಾರ ಮಾಡದವನೇ ಬ್ರಹ್ಮಚಾರಿಯೆಂದು ನನ್ನ ಅಭಿಪ್ರಾಯ !

**ಸೌದಾ** :— ಹಾಗಾದರೆ ಲಗ್ನಮಾಡಿಕೊಂಡು ಸುಮ್ಮನೇ ಏತಕ್ಕೆ ಮಾಡಿದಿರಿ, ಈ ಸಂಸಾರದ ವಿಸ್ತಾರವನ್ನು?

**ಮೋಘ** .— ವಿಸ್ತಾರವನ್ನು ಮಾಡಿದ್ದೇನೋ ನಿಜ; ಆದರೆ ಅದನ್ನು ಈಗ ನಿಸ್ತರಿಸುವುದು ಮಾತ್ರ, ಬಹು ದುಸ್ತರವಾಗಿದೆ.

**ಸೌದಾ** :— ಸ್ವಲ್ಪ ತಡೆಯಿರಿ, ನಿಮ್ಮ ಮುಂಡವನ್ನು ಯುದ್ಧಕ್ಕೆ ಕಳಿಸುವ ವ್ಯವಸ್ಥೆಯನ್ನು ನಾನು ಈಗಲೇ ಮಾಡುತ್ತೇನೆ (ಹೋಗುವಳು)

**ಮೋಘ** : —ಏನೇ ಇಷ್ಟರಲ್ಲಿಯೇ ನನ್ನ ವ್ಯವಸ್ಥೆಯನ್ನು ಮಾಡಬೇಡ. ಪಾಪ ! ಬಡಪ್ರಾಣಿ. ಇನ್ನೂ ನಾಲ್ಕು ದಿವಸ ಈ ಜಗತ್ತಿನಲ್ಲಿ ಬದುಕಿಕೊಂಡಿರಲಿ. ಮಾಡಮ್ಮಾ ಮಾಡು, ಏನೇನು ನನ್ನ ಅವಸ್ಥೆ ಮಾಡುನಿಯೋ ಮಾಡು ನಾವೇ ಸ್ವಬುದ್ಧಿಯಿಂದ ಆಪತ್ತನ್ನು ಮೈಮೇಲೆ ತಂದುಕೊಂಡಮೇಲೆ, ಅದನ್ನು ಭೋಗಿಸಲೇ ಬೇಕಲ್ಲವೆ ? ಆದರೆ ನಾನೊಬ್ಬನೇ ಹೀಗೆ ಅಳುತ್ತಾ ಕುಳಿತರೆ ಆಗುವುದೇನು ? ನನ್ನಂತೆ ಯಾವತ್ತು ಪುರುಷಜಾತಿಯವರು ಒಂದೇ ಕಾಲಕ್ಕೆ ಒಂದೇ ಸ್ವರದಲ್ಲಿ " ಧಿಕ್ಕಾರ, ಧಿಕ್ಕಾರವಿರಲಿ. ಈ ಸ್ತ್ರೀಯರಿಗೆ " ಎಂದು ಆಕ್ರೋಶ ಮಾಡಬೇಕು.

**ಸೌದಾ** :— (ಪ್ರವೇಶಿಸಿ) ಧಿಕ್ಕಾರವೇ—ಯಾರಿಗೆ ಸ್ತ್ರೀಯರಿಗೋ ? ಸ್ತ್ರೀ ಜಾತಿಗೆ ಧಿಕ್ಕಾರ ಮಾಡುವಿರಿ; ಆದರೇ ಸ್ತ್ರೀಯರೇ ಇಲ್ಲದಿದ್ದರೆ—

**ಮೋಘ** :— ಪುರುಷರು ಹುಟ್ಟುತ್ತಲೇ ಇರಲಿಲ್ಲಾ ಇದೇ ಅಲ್ಲವೇ

ನಿನ್ನ ಅಭಿಪ್ರಾಯವು ? ಪುರುಷರು ಸ್ತ್ರೀಯರ ಉದರದಲ್ಲಿ ಜನ್ಮಿಸಬೇಕಾಗುವು ದೆಂಬ ವಿಷಯವು ನನಗೆ ಹುಟ್ಟುವ ಪೂರ್ವದಲ್ಲಿಯೇ ತಿಳಿದಿದ್ದರೆ ನಾನು ಬ್ರಹ್ಮ ದೇವರ ಮುಂದೆ " ವಿಧಾತಾ, ನನ್ನನ್ನು ಸ್ತ್ರೀಯರ ಉದರದಲ್ಲಿ ಜನ್ಮಿಸಬೇಡ " ಎಂದು ಹಟ ಹಿಡಿಯುತ್ತಿದ್ದೆ. ಇಷ್ಟು ಮಾಡಿಯೂ ನನ್ನ ಅಭಿಪ್ರಾಯವು, ಆ ನಾಲ್ಕು ಮುಖದವನ ತಲೆಯಲ್ಲಿ ಬಿಂಬಿಸದಿದ್ದಿದ್ದರೆ, ತಾಯಿಯ ಉದರದಿಂದ ಪ್ರೇತವೇ ಜನ್ಮಿಸಿ ಬರುವಂತೆ, ವರವನ್ನಾದರೂ ಕೇಳಿಕೊಳ್ಳುತ್ತಿದ್ದೆ. ಆದರೆ ಇನ್ನುಮೇಲೆತಕ್ಕೆ ಅದರ ವಿಚಾರವು ? (ಸೌದಾಮಿನಿಯು ತಂದ ಆಯುಧಗಳನ್ನು ನೋಡಿ ಉಸುರುಗರೆದು ಆದರೆ ಇದೇನು ?)

**ಸೌದಾ** :— ಇದು ನಿಮ್ಮ ಯುದ್ಧ ಯಾತ್ರೆಯ ಸಿದ್ಧತೆಯು.

**ಮೇಘ** :— ಯುದ್ಧ ಯಾತ್ರೆಯೆನ್ನುವದಕ್ಕಿಂತಲೂ ಸ್ಮಶಾನ ಯಾತ್ರೆ ಯೆಂದು ಹೇಳು-ಅದರಲ್ಲೇನು ?

**ಸೌದಾ** :— ಯಾಕೆ ಹೀಗೆ ಭಯಪಡುವಿರಿ? ನೀವು ಪರಾಕ್ರಮಶಾಲಿ ಗಳಲ್ಲವೇ ?

**ಮೇಘ** :— ( ಅಳುಬುರುಕ ಸ್ವರದಲ್ಲಿ ) ಹೌದು ನಾನು ಪರಾಕ್ರಮ ಶಾಲಿ, ರಣಧೀರ, ಆದರೆ—

**ಸೌದಾ** :— ಆದರೆ ಏನು, ನಿಮ್ಮಂಥಹ ಹೇಡಿ ಪುರುಷರಿಗಿಂತಲೂ, ಪರಾಕ್ರಮದಲ್ಲಿ ನಾವು ಸ್ತ್ರೀಯರೇ ಮೇಲು. ಹೂಂ ಇರಲಿ, ತೆಗೆದುಕೊಳ್ಳಿರಿ ಈ ಧನುಷ್ಯವನ್ನು.

**ಮೇಘ** :— ಪ್ರಿಯೆ, ನಿನ್ನ ಈ ಡೊಂಕಾದ ಹುಬ್ಬುಗಳಿಗಿಂತ—ಈ ಧನುಷ್ಯವು ಹೆಚ್ಚು ಪರಾಕ್ರಮಿ ಇರುವುದೇನು ? (ಧನುಷ್ಯ ತಕ್ಕೊಳ್ಳುವನು)

**ಸೌದಾ** :— ತೆಗೆದುಕೊಳ್ಳಿರಿ ಈ ಬಾಣವನ್ನು.

**ಮೇಘ** :— ಬೇಡಾ ಬೇಡಾ, ನಿನ್ನ ತೀಕ್ಷ್ಣವಾದ ನೇತ್ರ ಬಾಣದಿಂದ ಎಷ್ಟು ವ್ಯಥೆಯಾದರೂ ಅದನ್ನು ಸಹಿಸಬಹುದು; ಆದರೆ ಈ ಬಾಣವು ಮಾತ್ರ ಬೇಡ—

**ಸೌದಾ** :— ಹೂಂ, ಈ ಶಿರಸ್ತ್ರಾಣವನ್ನು ತಲೆಯ ಮೇಲೆ ಧರಿಸಿರಿ.

**ಮೇಘ** :— ಈ ಶಿರಸ್ತ್ರಾಣವನ್ನು ಧರಿಸುವಷ್ಟರಲ್ಲಿ ನಾನು ಗತಪ್ರಾಣ ನಾಗುವುದೇ ನಿಜ.

**ಸೌದಾ** :— ಹೂಂ, ಇರಲಿ ಮೊದಲು ಈ ಶಿರಸ್ತ್ರಾಣವವನ್ನು ತಲೆಯ ಮೇಲೆ ಧರಿಸಿರಿ.

**ಮೋಘ** :— ತಾಂರವ್ಮಾ ತಾ, ಇಲ್ಲವಾದರೆ ಬಿಸಿಬಿಸಿಯಾದ ಒದೆತ ಗಳನ್ನು ತಿನ್ನಬೇಕಾದೀತು.

**ಸೌದಾ** :— ಹೂಂ ತೆಗೆದುಕೊಳ್ಳಿರಿ ಈ ಕತ್ತಿಯನ್ನು.

**ಮೋಘ** :— ಈ ಕತ್ತಿಗಿಂತಲೂ ನಿನ್ನ ನಾಲಿಗೆಯನ್ನೇ ಕೊಯ್ದು ಕೊಡು: ಏಕೆಂದರೆ ಕತ್ತಿಗಿಂತಲೂ ನಿನ್ನ ನಾಲಿಗೆಯು ಹದನವಾಗಿದೆ.

**ಸೌದಾ** :— ಏನು ಮಾತಾಡುವಿರಿ ?

**ಮೋಘ**:—ಕ್ಷಮಿಸು ಆದರೆ ಯಾವತ್ತೂ ಅಲಂಕರಿಸುವುದಾಯಿತಷ್ಟೇ?

**ಸೌದಾ** :— ಆಯಿತು. ಆಹಹ! ಈಗ ನೀವು ಒಳ್ಳೇ ಶೂರ ಸರದಾರ ರಂತೆ ಕಾಣಿಸುವಿರಿ. ಬಣಿವೆಯ ಮೇಲಿನ ಬೆದರು; ಒಳ್ಳೇ ದಿವ್ಯರೂಪ !

**ಮೋಘ** :— ಪ್ರೀಯೆ, ಇದೇನು ವಿಚಾರಿಸುವೆ ! ಹಾಗೆ ಇರುವುದು ನನ್ನ ಪುತಾಪ! ಆದರೆ ಎಷ್ಟು ಹೋತ್ತು ಸಹಿಸಲಿ ಈ ತಾಪ !

**ಸೌದಾ** :— ನಡೆಯಿರಿ ಇನ್ನು—ಯುದ್ಧಕ್ಕೆ

**ಮೋಘ** :— ಏನು ಹೇಳಿದೆ? ಯುಷ್ಧಕ್ಕೆ ಹೋಗಬೇಕೆ?

**ಸೌದಾ** :— ನನ್ನ ಅರ್ಧ ವಚನವಂತೆ ನಡೆಯುವೆನೆಂದು ನೀವು ನನಗೆ ವಚನ ಕೊಟ್ಟಿರುವಿರಷ್ಟೇ ?

**ಮೋಘ** :— ಹೌದು. ಅರ್ಧ ವಚನದಂತೆ ನಡೆಯಲಿಲ್ಲವೇ ನಾನು? ನಿನ್ನ ಅಭಿಪ್ರಾಯವೇನಿತ್ತು ? ವೇಷವನ್ನು ಧರಿಸಿರಿ, ಯುದ್ಧಕ್ಕೆ ಹೋಗಿರಿ. ವೇಷವನ್ನು ಧರಿಸಿದೆ. ಅರ್ಧ ವಚನವು ಮುಗಿಯಿತು. ಇನ್ನು ಯುದ್ಧಕ್ಕೆ ಏತಕ್ಕೆ ಹೋಗಲಿ !

**ಸೌದಾ** :— ಅಭಿಮನ್ಯು ಮಹಾರಾಜರು ಯುದ್ಧಕ್ಕೆ ಹೋಗಿರುವ ರಲ್ಲವೇ ?

**ಮೋಘ** :— ಮಹಾರಾಜರು ಮೂರ್ಖರಿದ್ದಾರೆ. ಬಂಗಾರದಂತಹ ಹೆಂಡತಿಯ ಸಹವಾಸದಲ್ಲಿ, ಸುಖದಿಂದ ಸಂಸಾರ ಮಾಡುವುದನ್ನು ಬಿಟ್ಟು, ಅವರಿಗೆ ಎಲ್ಲಿಯ ಅನಿಷ್ಟ ಪ್ರಾರಬ್ಧವು ನೆನಪಾಯಿತೋ ಕಾಣೆ. ಆದರೆ ಪ್ರಿಯೆ, ನಿನ್ನಂತಹ ಬೆಡಗುಗಾರ್ತಿಯಾದ ಹೆಂಡತಿಯನ್ನು ಬಿಟ್ಟು ಹೋಗಲಿಕ್ಕೆ ನಾನೇನು ಅಂತಹ ಮೂರ್ಖನಲ್ಲ.

**ಸೌದಾ** :— ಹೌದು, ಹೌದು. ನೀವು ಅಂತಹ ಚತುರರೇ ಇರುವಿರಿ. ನಡೆಯಿರಿ, ಇಲ್ಲಿಂದ ಹೊರಟು ಹೋಗಿರಿ.

**ಮೋಘ** :— ನನ್ನ ಮುದ್ದಿನ ಅರಗಿಳಿಯೆ ಬೇಡ ಬೇಡ. ನಾನು ಹಲವು ಬಗೆಯಿಂದ ನಿನ್ನ ಇಚ್ಛೆಯನ್ನು ಪೂರ್ಣಮಾಡುವೆನು. ನಿನ್ನನ್ನು ಗೌರಿಯಂತೆ ಮಣೆಯ ಮೇಲೆ ಕೂಡಿಸಿ ಪೂಜಿಸುವೆನು. ಪ್ರಿಯೆ, ನಿನ್ನ ಆಜ್ಞೆಯಂತೆ ನಡೆವ, ದಿನಾಲು ನಿನ್ನ ಕೂಡ ಮಾಡುವ ಪ್ರೇಮ ಕಲಹವೇ ನನಗೆ ಯುದ್ಧವು, ಮತ್ತು ನಿನ್ನೊಡನೆ ಮನೆಯಲ್ಲಿ ಸಾಕಿದ ಕೋಳಿಯಂತೆ ಸಂಸಾರವನ್ನು ಮಾಡಿ ನಿನ್ನ ಪಾದಗಳಲ್ಲಿ ತನುಮನಧನಗಳನ್ನು ಅರ್ಪಿಸುವುದೇ ನನಗೆ ರಾಜಕಾರಣವು. ಪ್ರೀಯೆ, ಬೇಕಾದ ಶಿಕ್ಷೆಯನ್ನು ಕೊಡು; ಆದರೆ ಈ ದೀಕ್ಷೆಯು ನನಗೆ ಬೇಡಾ; ಇಷ್ಟೇ ನಿನ್ನಲ್ಲಿ ಭಿಕ್ಷೆ ಬೇಡುವೆನು—

**ಸೌದಾ** :— ಅಭಿಮನ್ಯು ಮಹಾರಾಜರು ಯುದ್ಧಕ್ಕೆ ಹೋದರು.

**ಮೋಘ** :— ಹೌದು ಉತ್ತರಾದೇವಿಯವರು ಅವರನ್ನು ತಡೆಯುವುದಕ್ಕೆ ಎಷ್ಟೋ ಪ್ರಯತ್ನ ಮಾಡಿದರು. ನೀನು ನನ್ನನ್ನು ದಬ್ಬಿಬಿಡುವುದಕ್ಕೆ ಯತ್ನಿಸುತ್ತಿರುವಿ ಅವರು ಆ ಕಾಲಕ್ಕೆ ಶೋಕ ಮಾಡಿದರು. ನೀನು ನನ್ನನ್ನು ನೋಡಿ ನಗುತ್ತಿ. ಇದೇ ಏನು ಪತಿವ್ರತೆಯರ ರೀತಿ ?

**ಸೌದಾ** :— ಸ್ವದೇಶದ ಮರ್ಯಾದೆಯನ್ನು ರಕ್ಷಿಸುವುದಕ್ಕೋಸುಗ–

**ಮೋಘ** :— ಸ್ವತಃ ನಮಗೇ ಮರ್ಯಾದೆ ಇಲ್ಲ. ಇನ್ನು ಸ್ವದೇಶದ ಮರ್ಯಾದೆ ಯಾರಿಗೆ ಬೇಕಾಗಿದೆ? ಹಾಳಾಗಿ ಹೋಗಲಿ ಆ ಯುದ್ಧವು.

**ಸೌದಾ** :— ಕೈಯಲ್ಲಿ ಬಳೆ ಇಟ್ಟುಕೊಳ್ಳಿರಿ–ಬಳೆ; ಅದು ನಿಮಗೆ ಚೆನ್ನಾಗಿ ಶೋಭಿಸುವುದು.

**ಮೋಘ** :— ಬಳೆ ಇಡಿಸು, ಸೀರೆಉಡಿಸು, ಒಲೆಯ ಮುಂದೆ ಕೂಡಿಸು ಆದರೆ, ಯುದ್ಧದ ಹೆಸರು ಬೇಡ. ಈ ವಿಷಯವು ಪ್ರತ್ಯಕ್ಷವಾಗಿ ಮಾಡುವದಕ್ಕಿಂತಲೂ ಕೇಳುವುದಕ್ಕೇ ಬಹು ಚಮತ್ಕಾರ. ಯುದ್ಧಸ್ಯ ವಾರ್ತಾರಮ್ಯಾ?

**ಸೌದಾ** :— ಅದೋ ಕೇಳಿರಿ, ರಣದುಂದುಭಿಗಳು ಪ್ರಾರಂಭವಾದವು. ನಡೆಯಿರಿ ಬೇಗನೆ ಹೋಗುವಿರೋ ಇಲ್ಲವೊ ! ( ದಬ್ಬುವಳು )

**ಮೋಘ** :— ( ಕಕ್ಕುಲತೆಯಿಂದ ) ಹೋಗುತ್ತೇನೆ. ಆದರೆ ಪ್ರಿಯೆ, ನೀನೂ ನನ್ನ ಜೊತೆಗೆ ಬಾ. ನೀನು ನನ್ನ ಸಹಚಾರಿಣಿಯಲ್ಲವೇ ? ಎಲ್ಲಿ ನಾನು–ಅಲ್ಲಿ ನೀನು–ಎಲ್ಲಿ ನೀನು–ಅಲ್ಲಿ ನಾನು.

**ಸೌದಾ** :— ರಣದುಂದುಭಿಯು ನಿಮಗೆ ಕೇಳಿಸಿತೆ ?

**ಮೋಘಾ** :— ಕೇಳಿಸಿತು. ಆದರೆ ಅದು ರಣದುಂದುಭಿಯಲ್ಲ; ಯಮ ದೂತರ ಗರ್ಜನೆಯು. ಒಳ್ಳೇದು, ನನ್ನನ್ನು ನಾಲ್ಕು ಹೆಜ್ಜೆ ಮುಂದಕ್ಕಾದರೂ ಕಳಿಸುವವಕ್ಕೆ ಬಾ. ಪಂಚಾರತಿಯನ್ನು ತಂದು ಬೆಳಗುವುದಿಲ್ಲವೆ? ಉತ್ತರಾ ದೇವಿಯವರು ಅಭಿಮನ್ಯು ಮಹಾರಾಜರಿಗೆ ಪಂಚಾರತಿಯನ್ನು ಬೆಳಗಿದರು. ಅದರಂತೆಯೇ ನೀನು—

**ಸೌದಾ** :— ಸಾಕು ಸಾಕು, ಇದುವರೆಗೂ ಮಾಡಿದ ಪಂಚಾರತಿ ನಿಮಗೆ ಸಾಕಾಗಲಿಲ್ಲವೆ? ನಡೆಯಿರಿ—ಸುಮ್ಮನೆ. ಧಾರಾ ತೀರ್ಥವೇ ಮೋಕ್ಷದ ಸಾಧನವು.

**ಮೋಘಾ** :— ಪ್ರಿಯೆ, ನಿನ್ನ ಚರಣ ತೀರ್ಥವೇ ನನಗೆ ಮೋಕ್ಷದ ಧಾರಾತೀರ್ಥವು. ( ಕಾಲು ಹಿಡಿಯುವನು )

**ಸೌದಾ** :— ಸಾಕುಮಾಡಿರಿ, ಈ ವಾಚಾಳತನವನ್ನು. ಸುಮ್ಮನೆ ಹೋಗುವಿರೋ, ಎಳೆದಾಡುತ್ತಾ ತೆಗೆದುಕೊಂಡು ಹೋಗಲೋ ?

(ಎಳೆದಾಡುವಳು)

**ಮೋಘಾ** :— ಅನ್ಯಾಯವು, ಅತ್ಯಾಚಾರವು, ಬಲಾತ್ಕಾರವು ! ಧಿಕ್ಕಾರ ಧಿಕ್ಕಾರವಿರಲಿ ಈ ಸ್ತ್ರೀಯರಿಗೆ, ಜಗತ್ತಿನಲ್ಲಿಯ ಯಾವತ್ತೂ ಪುರುಷರೆ, ನನ್ನ ಅವಸ್ಥೆಯನ್ನು ನೋಡಿ ನೀವೂ ಜಾಗ್ರತರಾಗಿರಿ. ಒಂದು ವೇಳೆ ನೀವು ಈ ಕಂದಕವಲ್ಲಿ ಬೀಳುವುದೇ ಆದರೆ, ಕನಿಷ್ಟ ಪಕ್ಷಕ್ಕೆ ನನ್ನನ್ನು ವಿಚಾರಿಸಿ ಯಾದರೂ ಬೀಳಿರಿ. ನನ್ನ ಆಗ್ರಹದ ಕೊನೆಯ ವಿಜ್ಞಾಪನೆಯೇನಂದರೆ. ಬ್ರಹ್ಮಚಾರಿಯಾಗಿರು, ಏನಾದರೂ ಮಾಡು ಬ್ರಹ್ಮಚಾರಿಯಾಗಿರು.

## ಸಂವಾದ

**ಸೌದಾ** :— ಸಮರಕೆ ಪೋಗು ಧೀರಾ । ರಣಗಂಭಿರಾ । ಕುಣಿ ಕುಣಿ
ದಾಡುತೆ ಸಡಗರದಿ ಬೇಗಾ । ಪ್ರಿಯನಾಥಾ । ಪಲ್ಲ "

**ಮೋಘಾ** :— ರಣವಲ್ಲವೆ ಎನಗಿದು ಮರಣಾ । ನಿನ್ನ ಪಾದವೆನಗೆ ಮುಕ್ತಿ
ಸ್ಥಾನಾ ॥

**ಸೌದಾ** :—ನಡೆಯಿರಿ ತ್ವರಿತದಿ ಶೌರ್ಯವ ತೋರಿರಿ । ಕಡುಭಯ
ವನು ಬಿಡಿ । ಪುರುಷರಿಗಿದು ಸರಿಯೇ ॥

**ಮೋಘಾ** :— ಕಳವಳಿಗೆ । ಪ್ರಿಯರಮಣೀ ॥

**ಸೌದಾ** :— ಸೆಳೆದೊಯ್ಯುವೆ ನಾಸೀ ತೆರದೀ ॥ ೧ ॥

———

# ಮೂರನೆಯ ಪ್ರಸಂಗ

ಸ್ಥಳ ರಣರಂಗ, ದ್ರೋಣಾಚಾರ್ಯರ ಪ್ರವೇಶ

**ದ್ರೋಣ** :— ಚಕ್ರವ್ಯೂಹವನ್ನು ರಚಿಸುವಂತಹ ಘಾತುಕವಿಚಾರವು, ನನ್ನ ತಲೆಯಲ್ಲಿ ಎತ್ತ ಕಡೆಯಿಂದ ಬಂದು ಸೇರಿತೋ ತಿಳಿಯದಾಗಿದೆ. ಶಕುನಿಯ ಕಪಟಜಾಲದಿಂದ ದುರ್ಯೋಧನನು ದುರಾಗ್ರಹವನ್ನು ಹಿಡಿದು, ಈ ದ್ರೋಣನ ಸ್ವಾಭಿಮಾನೀ ಮನಸ್ಸನ್ನು ಮರ್ಮ ಭೇದಕ ಶಬ್ದಗಳಿಂದ ರೇಗಿಸದಿರದಿದ್ದಿದ್ದರೆ, ಸಂತಾಪದ ಭರದಲ್ಲಿ ನನ್ನಿಂದ ಇಂತಹ ಅವಿಚಾರತನವೇ ಆಗುತ್ತಿರಲಿಲ್ಲ. ಆ ಕಾರಸ್ಥಾನಿ ಕಪಟ ಪಟುಗಳ ಮಾತಿಗೆ ಮರುಳಾಗಿ,ನಾನೆಂಥ ಕಪಟ ಸಾಹಸವನ್ನು ಮಾಡಿದೆನು ! ಆದರೆ ಈ ಸಂತಾಪದ ಕೊನೆಯ ಪರಿಣಾಮವು—ನನ್ನನ್ನು ಪಶ್ಚಾತ್ತಾಪಕ್ಕೆ ಬೇರೆ ಗುರಿಮಾಡಲಿಕ್ಕಿಲ್ಲವಷ್ಟೇ ?

**ದುರ್ಯೋಧನ** :— ಆಚಾರ್ಯರೆ, ಇನ್ನು ವಿಲಂಬವೇಕೆ ? ಜಾಗ್ರುತಿಯಾಗಿ ಯುದ್ಧವು ಪ್ರಾರಂಭವಾಗಬೇಕಲ್ಲವೆ ?

**ಜಯದ್ರಥ** :— ಏಕೆ ಈ ದಿವಸವೂ ಆಚಾರ್ಯರ ಮುಖದ ಮೇಲೆ ಉತ್ಸಾಹದ ಚಿಹ್ನವೇ ತೋರುವದಿಲ್ಲಾ ?

**ದುರ್ಯೋಧನ** :— ಏನಾದರೊಂದು ಪ್ರಕಾರದ ವಿಲಕ್ಷಣ ವಿಚಾರ ತರಂಗಗಳಿಂದ,ಮನಸ್ಸು ಒಳ್ಳೇ ಗಲಾಟೆಯಲ್ಲಿ ಬಿದ್ದು ಹೋಗಿದೆ. ಅದು ಈ ಮುಖಮುದ್ರೆಯ ಮೇಲಿಂದ ಒಡೆದು ಕಾಣಿಸುವುದು.

**ಜಯ** :— ಆಚಾರ್ಯರ ಓಘವು , ಪಾಂಡವರ ಕಡೆಗಿರುವುದರಿಂದ, ಮನಸ್ಸಿನ ಸ್ಥಿತಿಯಲ್ಲಿ ಹೀಗೆ ವ್ಯತ್ಯಾಸವಾಗುವುದು ಸಹಜವಿದೆ.

**ದುರ್ಯೋ** :— ನಿಶ್ಚಯ ಆ ವಿಷಯವಾಗಿ ನಮಗೆ ಈಗೆರಡು ದಿವಸಗಳಿಂದ ಚೆನ್ನಾಗಿ ಅನುಭವಕ್ಕೆ ಬಂದಿರುವುದು. ಇದು ಮೂರನೇ ದಿವಸವು—

**ದ್ರೋಣ** :— ಅನುಭವವೇ, ಯಾವ ಪ್ರಕಾರದ ದುಷ್ಟ ಅನುಭವವು ನಿಮಗೆ ಬಂದಿರುವುದು ?

**ಜಯದ್ರಥ** :— ಕೌರವರ ವಿಷಯವಾಗಿ ನಿಜವಾದ ಅಂತಃಕರಣದ ಬುದ್ಧಿಯು ತಮ್ಮಲ್ಲಿ ಇಲ್ಲದೇ ಇರುವುದರಿಂದ, ಆಚಾರ್ಯರರ ಶೌರ್ಯವು ಶಿಥಿಲವಾಗುತ್ತ ನಡೆದಿರುವುದು. ಇದೇ ಅನುಭವವು.

ದ್ರೋಣ .— ಭಲೆ ! ನಿಮ್ಮ ನಿಜನಾದ ಕಪಟ ಬುದ್ಧಿಯ ವಿಚಾರಗಳು ತೀರಾ ಶಿಖರಕ್ಕೆ ಮುಟ್ಟಿದವು. ನಿನ್ನಿನ ಯುದ್ಧದಲ್ಲಿ ಪಾಂಚಾಲ ವೀರರ ಪರಾ ಜಯವಾಯಿತು. ಮತ್ಸ್ಯದೇಶದ ರಣದುರಂಧರರು ದಿಕ್ಕೆಟ್ಟು ಓಡಿಹೋದರು. ಅದನ್ನು ಮರೆತಿರೇನು ? ನಿಶ್ಚಯವಾಗಿ ಕಪಟಿಗಳೂ ವಿಶ್ವಾಸಘಾತಕಿಗಳೂ ಆದ ಮನುಷ್ಯರಿಗೆ ಜಗತ್ತೆಲ್ಲವೂ ಅದೇ ಪ್ರಕಾರವಾಗಿ ಕಾಣುವುದು ? ಭ್ರಷ್ಟ ಮತಿಗಳಾದ ನಿಮ್ಮಂಥ ದುಷ್ಟರ ಸಹವಾಸದಿಂದ ಸಜ್ಜನರ ಸರಳ ಬುದ್ಧಿಯು ಭ್ರಷ್ಟವಾಗದೆ ಹೇಗುಳಿದೀತು ?

**ದುರ್ಯೋ** :— ಆಚಾರ್ಯರೇ ಈಗಿನ ನಿಮ್ಮ ಮನಸ್ಸಿನ ಸ್ಥಿತಿಯು ಪ್ರಕಾರವನ್ನು ನಾನು ಸಂಪೂರ್ಣವಾಗಿ ಬಲ್ಲೆನು; ಮತ್ತು ಅದಕ್ಕೋಸುಗವೇ ನಾವು, ನಿಮ್ಮ ಪರಾಕ್ರಮದ ಮೇಲೆ ವಿಶ್ವಾಸವನ್ನಿಟ್ಟು ಕುಳಿತಿರುವೆವೆಂದು ತಾವು ತಿಳಿಯಬೇಡಿರಿ.

**ಜಯ** :— ಬ್ರಹ್ಮತೇಜವು ದುರ್ಬಲವಾಗಿದ್ದರೂ ಕೌರವರ ಕ್ಷಾತ್ರ ತೇಜವು ಇನ್ನೂ ಜೀವಂತವಾಗಿರುವುದು.

**ದುರ್ಯೋ** .— ಪ್ರಖರವಾದ ಕ್ಷಾತ್ರತೇಜದ ಮುಂದೆ, ನಿಸ್ತೇಜ ವಾದ ಬ್ರಹ್ಮತೇಜದ ಪ್ರಶಂಸೆಯನ್ನು ಕೇಳುವರಾರು ?

**ದ್ರೋಣ** :— ಬ್ರಹ್ಮತೇಜದ ಅವಮಾನವೇ ! ಧುರ್ಯೋಧನಾ, ಕ್ಷಾತ್ರತೇಜದ ನಿಸ್ಸಾರವಾದ ಅಹಂಕಾರದ ನಡಗರವನ್ನು, ಯಾರ ಮುಂದೆ ತೋರಿಸುವೆ ? ಕೌರವರ ಕ್ಷಾತ್ರತೇಜವನ್ನು ನಾನೇನು ಅರಿಯೆನೆ ? ಆ ನಿಮ್ಮ ಕ್ಷಾತ್ರತೇಜಕ್ಕೆ ಬ್ರಹ್ಮತೇಜದ ಬೆಂಬಲವು ಇಲ್ಲದಿದ್ದರೆ—

**ಜಯ** :— ಇಲ್ಲದಿದ್ದರೇನು ? “ ಕೌರವರ ಕ್ಷಾತ್ರತೇಜವು ನಿರ್ಮೂಲ ವಾಗಿ ಹೋಗುತ್ತಿತ್ತು ” ಎಂದು ಅಲ್ಲವೆ ನಿಮ್ಮ ಅಭಿಪ್ರಾಯವು ?

**ದ್ರೋಣ** :— ಹೌದು ಇದರಲ್ಲಿ ಸಂದೇಹವೇನು ? ಬ್ರಹ್ಮತೇಜವೂ ಮತ್ತು ಕ್ಷಾತ್ರತೇಜವೂ, ಎರಡೂ ಜೋಡಾಗಿ ಒಂದೇ ವಿಚಾರದಿಂದ ನಡೆಯು ಹತ್ತಿದರೇನೇ—

**ದುರ್ಯೋ** :— ಭರತಖಂಡದ ಉದ್ಧಾರವಾಗುವುದು ? ಭಲೆ, ಆಚಾ ರ್ಯರ ವೇದಾಂತವು ಬಹು ಗಂಭೀರವಾಗಿದೆ; ಆದರೆ ನನ್ನ ಅಭಿಪ್ರಾಯವೆಂದರೆ, ಸದ್ಯಕ್ಕೆ ಕೌರವರ ಪಕ್ಷದಲ್ಲಿ ಕ್ಷಾತ್ರತೇಜವೂ, ಬ್ರಹ್ಮತೇಜವೂ, ಒಕ್ಕಟ್ಟಾಗಿರು

ವನಲ್ಲವೇ ? ಹಾಗಾದರೆ ಇನ್ನೂವರೆಗೂ ನಮ್ಮ ಪರಾಕ್ರಮಕ್ಕೆ ಯಶವು ಏಕೆ ದೊರೆಯಬಾರದು ?

**ದ್ರೋಣ** :— ನಿಮ್ಮ ಪರಾಕ್ರಮದ ಅಸ್ತಿಭಾರವು ಅತ್ಯಂತ ಪಾಪಮಯವಾಗಿರುವುದರಿಂದ ನಿಮ್ಮ ಪಕ್ಷಕ್ಕೆ ಯಶವು ಎಂದೂ ದೊರೆಯುವುದಿಲ್ಲ. ಪರಾಕ್ರಮದ ಮಂದಿರವು ಧರ್ಮದ ಅಸ್ತಿಭಾರದ ಮೇಲೆ ನಿಂತಿರಬೇಕು. ಎತ್ತ ಕಡೆಗೆ ಧರ್ಮವೊ ಅತ್ತ ಕಡೆಗೆ ಜಯವು. ಬಹು ದ್ವೇಷಿಗಳಾಗಿದ್ದರೂ ಕೂಡ ಅವರೊಡನೆ ಧರ್ಮಯುದ್ಧವನ್ನೇ ಮಾಡಬೇಕು.

**ದುರ್ಯೋ** :— ಧರ್ಮಾಧರ್ಮದ ಹೇಡಿತನದ ವಿಚಾರಗಳು— ಪರಾಕ್ರಮಿಯಾದ ಕ್ಷಾತ್ರತೇಜಕ್ಕೆ ರುಚಿಸುವುದಿಲ್ಲ ! ಇಂತಹ ಕ್ಷುದ್ರವಾದ ವೇದಾಂತದ ವಿಚಾರಗಳು ಬ್ರಹ್ಮತೇಜಸ್ಸಿಗೇ ಶೋಭಿಸುವವು.

**ಜಯ** :— ಇದು ರಣಕ್ಷೇತ್ರವಿರುವುದು. ಯುದ್ಧಕ್ಕೋಸುಗ ಮಾಡಿದಂತಹ ಯಾವತ್ತೂ ಅಧರ್ಮಗಳೂ, ಅತ್ಯಾಚಾರಗಳೂ, ಕ್ಷಮ್ಯವಾಗಿರುವವು

**ದ್ರೋಣ** :— ಜಯದ್ರಥಾ, ನಾನು ಸೇನಾಪತಿಯಾಗಿರುವವರೆಗೆ ಅಧರ್ಮವನ್ನು ಎಂದೂ ಮಾಡಗೊಡಲಾರೆನು. ಬಲಿಷ್ಠನಾದ ವೀರನು ಶತ್ರುವಿನ ಕೂಡ ಸರಳ ಯುದ್ಧವನ್ನೇ ಮಾಡಬೇಕು. ಕಪಟ ಯುದ್ಧವನ್ನು ಮಾಡುವುದಿಲ್ಲವೆಂದು ನೀವು ನನಗೆ ವಚನ ಕೊಟ್ಟಿದ್ದನ್ನು ಮರೆಯಬೇಡಿರಿ.

**ಜಯ** :— (ಒಂದು ಮಗ್ಗುಲಲ್ಲಿ) ರಾಜಕಾರಣದಲ್ಲಿ ಇಂತಹ ವಚನಗಳು ಎಷ್ಟೋ ಆಗಿ ಹೋಗಿರುತ್ತವೆ. ಅವುಗಳನ್ನು ಲಕ್ಷಿಸುವವರಾರು ? ಶತ್ರುವನ್ನು ತತ್‌ಕ್ಷಣವೇ ಸಂಹರಿಸಬೇಕು—ಇದೇ ನಿಜವಾದ ಧರ್ಮವು.

**ಶಕುನಿ** : — (ಪ್ರವೇಶಿಸಿ) ಇನ್ನು ಆ ಧರ್ಮಕರ್ಮದ ವಿಚಾರಗಳನ್ನು ಸಾಕುಮಾಡಿರಿ. ಶತ್ರುಗಳು ತೀರಾ ಸಮೀಪಕ್ಕೆ ಬಂದು ನಿಂತಿರುವರು. ನೀವು ಇಲ್ಲಿಯೆ ಸುಮ್ಮನೆ ಇತ್ತಂಡವಾದವನ್ನು ಬೆಳೆಸಿರುವಿರಿ. ಪ್ರಸಂಗವೇನು ? ನಿಮ್ಮ ನಿಮ್ಮೊಳಗೆ ಈ ಕಲಹಲವೇನು ? ಕ್ಷಾತ್ರತೇಜವೂ ಶ್ರೇಷ್ಠವಿದೆ; ಬ್ರಹ್ಮತೇಜವಾದರೂ ಪ್ರಭಾವಶಾಲಿಯದೆ; ನಡೆಯಿರಿನ್ನು ಸಾಕು ನಿಮ್ಮ ವಾದವು.

**ದುರ್ಯೋ** :— ಸರಿ, ಸರಿ. ಮಾವಾ ನಿನ್ನ ಸಿದ್ಧಾಂತವು ಯೋಗ್ಯವಾಗಿದೆ. ರಾಮನಾಯ ಸ್ವಸ್ತಿ, ರಾವಣಾಯ ಸ್ವಸ್ತಿ !

**ಶಕುನಿ** : — ಶತ್ರುವು ತೀರಾ ಬಾಗಿಲದಲ್ಲಿ ಬಂದು ಕುಳಿತಿರುವನು.

ನಾವು ನಮ್ಮ ನಮ್ಮೊಳಗೇಜಗಳವಾಡುತ್ತ ಕುಳಿತುಕೊಂಡರೆ ಶತ್ರುವಿನ ಸಮಾಚಾರವನ್ನು ತಕ್ಕೊಳ್ಳುವವರಾರು ?

ರಾಗ ಕಾಮೋದ, ತಾಳ ಏಕ್ತಾ,

ಅರಿಯು ಪ್ರಬಲನಾಗಿ ದ್ವಾರದೀ । ಬಂದು ನಿಂತಿಹ ।
ತರವೇನಿದು ನಿಮ್ಮೊಳಿಂತು । ಬರಿದೆ ಕಲಹ ಗೈಯ್ಯುವರೆ ॥ ಪಲ್ಲ ॥
ವೈರಗಳ ಸೈನ್ಯ ಸಮರದಿ ಚಂಡಾಡಿ ॥ ರಣಸಾಹಸವ
ಸುಯಶದಾ ಕೀರ್ತಿ ತೋರಿಸಿ । ೧ ॥

ಆಚಾರ್ಯರೆ, ನಡೆಯಿರಿನ್ನು ವಿಲಂಬಮಾಡಿ ಪ್ರಯೋಜನವಿಲ್ಲ.

**ದ್ರೋಣ :—** ದುರ್ಯೋಧನಾ, ನೀನು ಕರ್ಣ, ಕೃಪ, ದುಶ್ಶಾಸನ, ಇವರನ್ನು ಸಹಾಯಕ್ಕೆ ತೆಗೆದುಕೊಂಡು ಚಕ್ರವ್ಯೂಹದ ಮಧ್ಯಭಾಗದಲ್ಲಿ ಸಿದ್ಧವಾಗಿರು. ನಾನು ಚಕ್ರವ್ಯೂಹದ ಬಾಗಿಲವನ್ನು ರಕ್ಷಿಸುತ್ತೇನೆ ಲಕ್ಷಣ ಮತ್ತು ಜಯದ್ರಥರಾದರೂ ನನ್ನ ಸಹಾಯಕ್ಕಿರಲಿ.

**ಶಕುನಿ :—** ಯುಧಿಷ್ಠಿರನ ಸಂರಕ್ಷಣೆಗೋಸುಗ ಸಾತ್ಯಕಿಯನ್ನಿಟ್ಟು ಅರ್ಜುನನು ಸಂಶಪ್ತಕರ ಕೂಡ ಯುದ್ಧಕ್ಕೆ ಹೋಗಿರುವನೆಂದು ಗೂಢಚಾರನು ಈಗ ತಾನೇ ಸಮಾಚಾರವನ್ನು ತಂದಿರುವನು.

**ಜಯ :—** ಏನು, ಅರ್ಜುನನೇ ಇಲ್ಲವೇ ? ಸರಿ ಹಾಗಾದರೆ ಈ ಜಯದ್ರಥನು ಪ್ರತ್ಯಕ್ಷ ಕಾಲನು ಬಂದರೂ ಅವನಿಗೆ ಭಯಪಡತಕ್ಕವನಲ್ಲ. ಶ್ರೀಶಂಕರನ ವರಪ್ರಸಾದದಿಂದ ಅರ್ಜುನನ್ನು ಬಿಟ್ಟು ಮಿಕ್ಕ ಪಾಂಡವರನ್ನು ರಸಾತಲಕ್ಕೆ ತುಳಿದು, ರಣಯಜ್ಞಕ್ಕೆ ಆಹುತಿಯನ್ನು ಕೊಡುವುದಕ್ಕೆ ನಾನು ಸಮರ್ಥನಾಗಿರುವೆನು. ಆಚಾರ್ಯರೇ, ಈ ದಿವಸ ಯುದ್ಧದಲ್ಲಿ ಸೇನಾಪತಿಯ ಅಧಿಕಾರವು ನಿಮ್ಮದು; ಪರಾಕ್ರಮವು ನನ್ನದು ! ( ಹೋಗುವನು )

**ದ್ರೋಣ :—** ಎಲ ಎಲಾ ಎಂಥ ಉನ್ಮತ್ತತನವು ( ಹೋಗುವನು )

—●—



# ನಾಲ್ಕನೆಯ ಪ್ರಸಂಗ

(ಸ್ಥಳ, ಚಕ್ರವ್ಯೂಹದ ಹತ್ತಿರ ಅಭಿಮನ್ಯು, ಭೀಮ, ನಕುಲ. ಸಹದೇವರು ಪ್ರವೇಶ ಮಾಡುತ್ತಾರೆ.)

**ಅಭಿ :—** ಬಿಡು ಬಿಡು, ಭೀಮಕಕ್ಕಾ ನನ್ನನ್ನು ತಡೆಯ ಬೇಡ. ಈ ಅಭಿಮನ್ಯು ಒಬ್ಬನೇ ಈ ಚಕ್ರವ್ಯೂಹದಲ್ಲಿ ಧುಮುಕಿ ಇದನ್ನು ಭೇದಿಸ ತಕ್ಕವನು !

**ಭೀಮ :—** ಈ ಭೀಮನು ನಿನ್ನೊಬ್ಬನನ್ನೇ ಎಂದೂ ಬಿಡಲಾರನು.

**ಅಭಿ :—** ಕಕ್ಕಾ, ನಿಮ್ಮೆಲ್ಲರ ಮಂಗಲ ಆಶೀರ್ವಾದದ ಶಿರಸ್ತ್ರಾಣವು ನನ್ನ ತಲೆಯಮೇಲಿರುವುದು; ಮತ್ತು ಶ್ರೀಕೃಷ್ಣನ ಕೃಪಾಕವಚವು ನನ್ನ ಸರ್ವಾಂಗವನ್ನು ರಕ್ಷಿಸುತ್ತಿರುವುದು; ಅಂದಮೇಲೆ ಪ್ರತ್ಯಕ್ಷ ಕಾಲನು ಬಂದರೂ ನಾನೇತಕ್ಕೆ ಭಯಪಡಲಿ ? ನಡೆಯಿರಿ. ನೀವು ಎದುರಾಗಿ ನಿಂತಿರುವ ಶತ್ರುವಿನ ಸಮಾಚಾರವನ್ನು ತೆಗೆದುಕೊಳ್ಳಿರಿ. ಅದೋ ನೋಡಿರಿ ಶತ್ರು ಸೈನ್ಯವು ಒಳ್ಳೇ ವೇಗದಿಂದ ಇತ್ತ ಕಡೆಗೇ ಬರುತ್ತಿರುವುದು. ಅದನ್ನು ಮುಂದಕ್ಕೆ ಬಿಡದೆ ಅಲ್ಲಿಯೇ ತಡೆಹಾಕಿರಿ.

(ತೆರೆಯ ಮರೆಯಲ್ಲಿ ರಣವಾದ್ಯಗಳು ಮೊಳಗುವವು. ಸೈನ್ಯದ ಹುಯ್ಲು ಕೇಳಿಸುವದು;)

**ಭೀಮ:—** ಈ ಗದೆಯ ಒಂದೇ ಪ್ರಹಾರದಿಂದ ಆ ಸೈನ್ಯವನ್ನು ಸಂಹರಿಸಿ, ಕೂಡಲೆ ನಿನಗೆ ಬೆಂಬಲನಾಗಲು ಈಗಲೇ ಬರುವೆನು. (ಹೋಗುವನು)

**ಅಭಿ :—** ಈ ಅಭಿಮನ್ಯುವಾದರೂ ಈ ಚಕ್ರವ್ಯೂಹದಲ್ಲಿ, ಕೆರಳಿದ ಸಿಂಹದ ಮರಿಯಂತೆ ಜಿಗಿದು ಅದನ್ನು ಭೇದಿಸಿ— (ಆವೇಶದಿಂದ ಹೋಗುವನು)

**ಜಯ :—** (ಪ್ರವೇಶಿಸಿ) ಎಚ್ಚರಿಕೆ, ಒಂದು ಹೆಜ್ಜೆಯನ್ನು ಮುಂದಿಟ್ಟ ದ್ದಾದರೆ, ಪ್ರಾಣಸಂಕಟಕ್ಕೆ ಗುರಿಯಾಗುವೆ.

**ಅಭಿ :—** ಎಲೋ ಹೋಗು, ನಿನ್ನಂತಹ ದುರಾತ್ಮನ ಬೆದರಿಕೆಗೆ ನಾನೇನು ಭಯಪಡತಕ್ಕವನಲ್ಲ. ಬಾ ಹೀಗೆ ಮುಂದಕ್ಕೆ; ಯುದ್ಧಕ್ಕೆ ಸಿದ್ಧ ನಾಗು.

**ಜಯ :—** ಏನು ನಿನ್ನ ಕೂಡ ಯುದ್ಧವೇ ! ಮಗುವೇ, ಯುದ್ಧ ವೆಂದರೆ ಹುಡುಗರ ಆಟವಲ್ಲ. ಸುಮ್ಮನೆ ಮನೆಗೆ ಹೋಗಿ, ನಿನ್ನ ಹೆತ್ತ ತಾಯಿಗೆ ಒಂದು ಸವಿಯಾದ ಮುದ್ದುಕೊಟ್ಟು, ಅವಳ ಜೊತೆಗೆ ಪ್ರೀತಿಯ

ಮಾತುಗಳನ್ನಾಡುತ್ತ ಕುಳಿತುಕೋ ಹೋಗು ದೊಡ್ಡ ಮಾತುಗಳನ್ನಾಡ ಬೇಡ. (ನಗುವನು)

**ಅಭಿ** :— ನಕ್ಕು ನನ್ನನ್ನು ತಿರಸ್ಕಾರ ಮಾಡುವಿಯಾ? ಮೃತ್ಯುವಿನ ಬಾಯಿಗೆ ಸಿಕ್ಕಿರುವಿ, ಜೋಕೆ, ಪ್ರಾಣದ ವಿಷಯವಾಗಿ ಜಾಗೃತನಾಗು ! ಇಕೋ ಬಾಣವನ್ನು ಪ್ರಯೋಗಿಸುವೆನು ಸಹಿಸು (ಬಾಣವೇರಿಸುವನು)

**ಜಯ** :— ನಿನ್ನಂತಹ ಒಂದು ಚೋಟು ಹುಡುಗನ ಕೂಡ ಯುದ್ಧ ಮಾಡುವುದಕ್ಕೆ ಧನುಷ್ಯ ಬಾಣಗಳೇತಕ್ಕೆ, ಒಂದು ಏಟು ಕೆನ್ನೆಗೆ ಕೊಟ್ಟು, ನಿನ್ನನ್ನು ಮಣ್ಣುಪಾಲು ಮಾಡುವೆನು.

(ಮೈಮೇಲೆ ಹೋಗುವನು)

**ಅಭಿ** :— ಬಾ, ಹಾಗಾದರೆ, ನಿನ್ನನ್ನು ಈಗಲೇ ರಸಾತಳಕ್ಕೆ ಮೆಟ್ಟು ವೆನು. (ಇಬ್ಬರಿಗೂ ಯುದ್ಧವಾಗಿ ಜಯದ್ರಥನು ಬೀಳುವನು.) ಏಕೆ ಜಯದ್ರಥಾ, ಎಲ್ಲಿ ಹೋಯಿತು ? ನಿನ್ನ ಶೂರತನದ ಪೌರುಷವು ? ಏಳು ಮೇಲಕ್ಕೆ ಮತ್ತೆ ಯುದ್ಧಕ್ಕೆ ಸಿದ್ಧನಾಗು.

**ಜಯ** :— ಘಾತವು, ಘಾತವು. (ಮೂರ್ಛಿತನಾಗುವನು)

**ಅಭಿ** :— ಈತನು ಮೂರ್ಛಿತನಾಗಿ ಬಿದ್ದನು. ಮೂರ್ಛಿತನಾದವನ ಮೇಲೆ ಶಸ್ತ್ರವೆತ್ತುವುದು ವೀರನಿಗೆ ಭೂಷಣವಲ್ಲ. ಈತನು ಹೀಗೇ ಬಿದ್ದು ಕೊಳ್ಳಲಿ. (ಹೋಗುವನು)

**ಜಯ** :— (ಎಚ್ಚರಾಗಿ) ಹೋದನು, ಎಲ್ಲಿಗೆ ಹೋದನು ? ಓಡಿ ಹೋದನು. ಈ ಕಾಲನ ಬಲೆಯಲ್ಲಿ ಸಿಕ್ಕು ಪಾರಾಗಿ ಹೋದನು ! ಧಿಕ್ಕಾರ ಧಿಕ್ಕಾರವಿರಲಿ ! ಈ ನನ್ನ ಶೌರ್ಯಕ್ಕೆ. ಈ ವೀರನಾದ ಸಿಂಧುರಾಜನ ಪರಾ ಕ್ರಮವು ಯಃಕಶ್ಚಿತ ಹುಡುಗನಿಂದ ಮೊದಲ ಹೊಡೆತಕ್ಕೇ ಮಣ್ಣುಪಾಲಾಗಿ ಹೋಯಿತೇ ? ಹುಡುಗನ ವಯಸ್ಸು ಕಿರಿದು; ಆದರೆ ಪರಾಕ್ರಮವು ಹಿರಿದು. ಇದರ ಸೇಡು ತೀರಿಸಿಕೊಳ್ಳದಿದ್ದರೆ, ನಾನು ಜಯದ್ರಥನೇ ಅಲ್ಲ (ಹೋಡುವನು)

**ಕರ್ಣ** :— (ಪ್ರವೇಶಿಸಿ) ಅನರ್ಥವು.

**ಜಯ** :— ಯಾರು ಕರ್ಣನೆ ? ಏನಾಯಿತು ?

**ಕರ್ಣ** :— ಅಭಿಮನ್ಯು ಅನರ್ಥಮಾಡಿದನು. ಚಕ್ರವ್ಯೂಹವನ್ನು ಭೇದಿಸಿ ಶಲ್ಯನನ್ನೂ ದುರ್ಯೋಧನನ್ನೂ, ಮೂರ್ಛೆಗೊಳಿಸಿದನು. (ನೋಡಿ) ಅದೋ ನೋಡು, ಅಡ್ಡವಾಗಿ ಬಂದ ವೀರರ ಶಿರಸ್ಸನ್ನು ಚರಚರನೆ ಕೊಯುತ್ತ ಆ ಹುಡುಗನು ಚಕ್ರವ್ಯೂಹವನ್ನು ಮುರಿದು ದಿಕ್ಕೆಡು ಮಾಡುತ್ತಿರುವನು.

ಹೋದನು, ಹೋದನು, ಅಭಿಮನ್ಯು ಚಕ್ರವ್ಯೂಹದ ಮಧ್ಯಭಾಗಕ್ಕೇ ಹೋದನು. ಈ ದಿವಸ ಚಿನ್ಹವು ಚೆನ್ನಾಗಿ ಕಾಣುವುದಿಲ್ಲ

**ಜಯ** :— ಕರ್ಣಾ, ಆ ಸಣ್ಣ ಹುಡುಗನಿಗೆ ಭಯ ಪಟ್ಟು, ಹೆಂಗಸಿನಂತೆ ಓಡಿ ಬಂದು, ಅವನ ಪರಾಕ್ರಮದ ಕೌತುಕವನ್ನು ಮಾಡುತ್ತಿರುವೆ. ಅಭಿಮನ್ಯುವು ಈಗ ಚಕ್ರವ್ಯೂಹದ ಮಧ್ಯದಲ್ಲಿ ಸಿಕ್ಕಿರುವನು. ಇನ್ನು ಅಲ್ಲಿಂದ ಹೇಗೆ ಪಾರಾಗಿ ಬರುವನೋ ನೋಡುವೆನು. ಅಲ್ಲಿಯೇ ಅವನ ಕಪಾಳಮೋಕ್ಷವಾಯಿತೆಂತಲೇ ತಿಳಿ

**ಕರ್ಣ** :— ಅದೋ ನೋಡು, ಭೀಮ, ಸಾತ್ಯಕಿ, ನಕುಲ, ಸಹದೇವ ಮೊದಲಾದ ಪಾಂಡವವೀರರು, ಅವನ ಸಹಾಯಕ್ಕೋಸುಗ ಹೇಗೆ ಧಾವಿಸಿ ಹೋಗುತ್ತಿರುವನು.

**ಜಯ** :— ನಡೆ ಹಾಗಾದರೆ, ಅವರನ್ನು ಅಲ್ಲಿಯೇ ತಡೆದು, ಅಭಿಮನ್ಯು ಒಬ್ಬನೇ ನಮ್ಮ ಕೈಗೆ ಸಿಕ್ಕುವಂತೆ ಪ್ರಯತ್ನ ಮಾಡೋಣ.

**ಕರ್ಣ** :— ಹೌದು, ಭೀಮನನ್ನೂ ಸಾತ್ಯಕಿಯನ್ನೂ ಯುದ್ಧ ಮಾಡುತ್ತ ದೂರಕ್ಕೆ ತೆಗೆದುಕೊಂಡು ಹೋಗಬೇಕು; ಅಂದರೆ ಅಭಿಮನ್ಯು ಒಬ್ಬನೇ ಕೈಗೆ ಸಿಕ್ಕುವನು

**ಜಯ** :— ಈ ಪ್ರಸಂಗದಲ್ಲಿ ಕೃಷ್ಣಕಾರಸ್ಥಾನದಿಂದಲೇ ಕಾರ್ಯವನ್ನು ಸಾಧಿಸಬೇಕು. ಶತ್ರುಗಳನ್ನು ಅಗಲಿಸಿ, ಅವರು ಒಕ್ಕಟ್ಟಾಗಿರುವ ಸಾಮರ್ಥ್ಯವನ್ನು ಕ್ಷೀಣಮಾಡಿದ ವಿನಾ, ನಮಗೆ ಜಯವು ದೊರಕುವ ಚಿನ್ಹವು ಕಾಣುವುದಿಲ್ಲ. (ಹೋಗುವನು)

**ದ್ರೋಣ** :— (ಪ್ರವೇಶಿಸಿ) ಏನು ? ದುರ್ಯೋಧನ ಪುತ್ರನಾದ ಲಕ್ಷಣನ ಸಂಹಾರವಾಯಿತೆ ? ಶಲ್ಯಪುತ್ರನಾದ ರುಕ್ಮರಥನು ರಣಾಂಗಣದಲ್ಲಿ ಮಡಿದು ಹೋದನೆ ? ನಾನು ಒಳ್ಳೇ ಕುಶಲತೆಯಿಂದ ಆ ಮಹಾ ಪರಾಕ್ರಮಶಾಲಿಯಾದ ಅರ್ಜುನನನ್ನು ಎರಡನೆಯ ಕಡೆಗೆ ಯುದ್ಧದಲ್ಲಿ ತೊಡಕಿಸಿದೆನು. ಆದರೆ–

**ಅಭಿ** :— (ರಕ್ತಮಯನಾಗಿ ಪ್ರವೇಶಿಸಿ) ಆದರೆ–ಏನು ಅದೇ ಕೇಸರಿಯ ಅರ್ಭಕನು ಚಕ್ರವ್ಯೂಹವನ್ನು ಭೇದಿಸಿ ದಿಕ್ಪಾಪಾಲು ಮಾಡಿದನು

**ದ್ರೋಣ** :— (ಆಶ್ಚರ್ಯದಿಂದ) ಯಾರು ! ಅಭಿಮನ್ಯುವೇ? ನನ್ನ ಪ್ರಿಯ ಶಿಷ್ಯ–ಪಾರ್ಥನ ತನಯನಾದ ವೀರ ಅಭಿಮನ್ಯು ನೀನೆಯೇ ?

**ಅಭಿ** :— ಹೌದು ಆಚಾರ್ಯರೆ, ಈ ಪಾರ್ಥಸುತನಾದ ಅಭಿಮನ್ಯು ತಮಗೆ ಅಭಿವಂದಿಸುವನು, ಗುರುಪೂಜೆಯನ್ನು ಸ್ವೀಕರಿಸಬೇಕು.

(ಬಾಣಗಳನ್ನು ಏರಿಸುವನು)

**ದ್ರೋಣ** :— (ಸ್ವಗತ) ಭಾಪು, ಭಾಪು, ಕುಮಾರಾ, ಭಾಪು ಭಾಪು, ನಿನ್ನಂತಹ ತೇಜಸ್ವೀ ವೀರ ಕುಮಾರರು ರಾಷ್ಟ್ರಸೇವೆಗೋಸುಗ ಸರ್ವಸ್ವಕ್ಕೂ ತಿಲಾಂಜಲಿಯನ್ನು ಕೊಡುವುದಕ್ಕೆ ಸಿದ್ಧರಾದಮೇಲೆ ಈ ಭರತಖಂಡದ ಭಾಗ್ಯೋದಯವಾಗುವುದಕ್ಕೆ ಸಂದೇಹವೇನು ?

**ಅಭಿ** :— ಆಚಾರ್ಯರೆ, ತಾವು ಹೀಗೇಕೆ ಸ್ತಬ್ಧರಾಗಿ ನಿಂತಿರುವಿರಿ ? ಈ ಮಂದಮತಿಯಾದ ಬಾಲಕನ ಪೂಜೆಯನ್ನು ತಾವು ಸ್ವೀಕರಿಸುವುದಿಲ್ಲವೇ?

**ದ್ರೋಣ** :— (ಸ್ವ) ಹಾಯ್ ಹಾಯ್ ! ದುಷ್ಟ ಮತಿಗಳಾದ ದುರ್ಯೋಧನಾದಿ ಚಾಂಡಾಲರ ಪ್ರೇರಣೆಯಿಂದ, ಈ ಚಕ್ರವ್ಯೂಹವನ್ನು ರಚಿಸಿದೆನು; ಆದರೆ, ಈ ವೀರ ಕುಮಾರನು ಈ ಚಕ್ರವ್ಯೂಹವನ್ನು ಭೇದಿಸುವನೆಂಬ ಕಲ್ಪನೆಯು, ಆ ಸಮಯಕ್ಕೆ ನನ್ನ ಬುದ್ಧಿಗೆ ತೋಚಲಿಲ್ಲ ಆಗಲಿ, ಪ್ರಸಂಗ ಒಂದದ್ದನ್ನು ಅನುಭೋಗಿಸದೆ ಗತ್ಯಂತರವಿಲ್ಲ.

**ಅಭಿ** :— ಆಚಾರ್ಯರೆ—

**ದ್ರೋಣ** :— ಕುಮಾರಾ ! ನಿನ್ನಂತಹ ಬಾಲಕನ ಮೇಲೆ ಬಾಣ ಪ್ರಯೋಗಮಾಡುವುದಕ್ಕೆ ನನ್ನ ಕೈಯಲ್ಲಿ ಸಾಮರ್ಥ್ಯವೇ ಇಲ್ಲ. ನಿನ್ನ ಪರಾಕ್ರಮದ ಕೌತುಕ ಮಾಡುವುದನ್ನು ಬಿಟ್ಟು, ನಿನ್ನಕೂಡ ಯುದ್ಧ ಮಾಡುವುದು ನನಗೆ ಲಾಂಛನಾಸ್ಪದವೆನಿಸುವುದು; ಮತ್ತು ಈ ದ್ರೋಣನ ಶೌರ್ಯಕ್ಕೆ ಅದು ಕುಂದು.

**ಅಭಿ** :— ಆಚಾರ್ಯರೆ, ತಾವು ನಮ್ಮ ಶತ್ರುಗಳು, ಕೌರವರ ಸೇನಾಧೀಶರು ಮತ್ತು –

**ದ್ರೋಣ** :— ಧಿಕ್ಕಾರ ಧಿಕ್ಕಾರವಿರಲಿ ನನ್ನ ಸೇನಾಧೀಶಪದಕ್ಕೆ ! ಕೌರವರ ಸೇನಾಧೀಶನಾದರೂ ಈ ದ್ರೋಣನ ಅಂತಃಕರಣದಲ್ಲಿ ನ್ಯಾಯಬುದ್ಧಿಯು ಇನ್ನೂ ಜಾಗ್ರತವಾಗಿದೆ. ಬಾ ಸುಕುಮಾರಾ, ನಿನ್ನ ಅದ್ವಿತೀಯವಾದ ಪರಾಕ್ರಮವನ್ನು ಹೊಗಳಿ, ನಿನ್ನ ಶಿರಸ್ಸಿನ ಮೇಲೆ ಆನಂದಾಶ್ರುಗಳನ್ನು ಸುರಿಸಿ ಸಂತೋಷಪಡುವೆನು. (ಅವನನ್ನು ಅಪ್ಪಿಕೊಳ್ಳುವನು) ಮಗುವೇ, ಭಯಪಡಬೇಡ, ನಾನು ಪಾಂಡವರ ಶತ್ರುವಾದರೂ ನ್ಯಾಯ ನೀತಿ–ಧರ್ಮ

ಗಳಿಗೆ ಶತ್ರುವಾಗಿಲ್ಲ; ಅಲ್ಲದೆ ನೀನು ಶತ್ರುಪಕ್ಷದವನಾದರೂ ವೀರನಾಗಿರುವೆ ವೀರರ ಗೌರವವನ್ನು ವೀರರೇ ಮಾಡಬೇಕಲ್ಲವೆ? ಆದರೆ ಕುಮಾರಾ ಈ ಸ್ಥಳವು ನಿನ್ನ ಜೀವಿತಕ್ಕೆ ಘಾತಕವಿದೆ. ಅದಕ್ಕೋಸುಗ ನೀನು ಒಂದು ಕ್ಷಣವಾದರೂ ಇಲ್ಲಿ ನಿಲ್ಲದೆ ಜಾಗ್ರತೆಯಾಗಿ ಹೊರಡು.

ಅಭಿ :— ಏನು! ನಾನು ಇಲ್ಲಿಂದ ಓಡಿ ಹೋಗಲೋ?

**ದ್ರೋಣ** :— ಹೌದು, ಸಮಯವನ್ನು ಸಾಧಿಸಿ ಜೀವವನ್ನು ಉಳಿಸಿ ಕೊಂಡು ಮರಳಿ ಹೋಗು.

ಅಭಿ :— ಆಚಾರ್ಯರೇ, ಇಂತಹ ವಿಚಾರವನ್ನು ಸೂಚಿಸುವುದು ತಮ್ಮಂಥವರಿಗೆ ಭೂಷಣವಲ್ಲ. ಕರ್ತವ್ಯಕ್ಕೆ ವಿಮುಖನಾಗಿ ರಣಭೂಮಿ ಯಿಂದ ಓಡಿ ಹೋಗುವುದು, ವೀರನಾದವನಿಗೆ ಲಾಂಛನವು. ಈ ಅಭಿಮನ್ಯುವು ಪ್ರತ್ಯಕ್ಷಕಾಲನ ಕೂಡ ಸಹ ಹೋರಾಡುವುದಕ್ಕೆ ಭಯಪಡತಕ್ಕವನಲ್ಲ. ಕೌರವರ ಹದಿನೆಂಟು ಅಕ್ಷೋಹಿಣೀ ಸೈನ್ಯವು—ಏಕಕಾಲಕ್ಕೆ ನನ್ನ ಮೇಲೆ ನಾಗಿ ಬಂದರೂ ನಾನು ಲಕ್ಷಿಸತಕ್ಕವನಲ್ಲ!

**ದ್ರೋಣ** :— ಕುಮಾರಾ, ಈ ಆತ್ಮಘಾತಕ ವಿಚಾರವನ್ನು ಬಿಟ್ಟು ಸುಮ್ಮನೆ ನನ್ನ ಮಾತುಗಳನ್ನು ಕೇಳಿ ಹೊರಟು ಹೋಗು—

(ಪರದೆಯಲ್ಲಿ "ಹೊರಟು ಹೋಗು? ಇನ್ನೆಲ್ಲಿಗೆ ಹೊರಟುಹೋಗುವೆ?")

ಅದೋ ನೋಡು ದುಶ್ಯಾಸನಾದಿ ಕೌರವ ವೀರರು ಇತ್ತಕಡೆಗೇ ಬಂದರು. ಹೋಗು ಹೋಗು ಜಾಗ್ರತೆಯಾಗಿ ಇಲ್ಲಿಂದ........

ಅಭಿ :— ಆಚಾರ್ಯರೆ, ತಾವೇ ಇಲ್ಲಿಂದ ಹೊರಟು ಹೋಗಿರಿ; ಇಲ್ಲ ವಾದರೆ ಯುದ್ಧಕ್ಕೆ ಸಿದ್ಧರಾಗಿರಿ.

**ದ್ರೋಣ** :— ನಿನ್ನಂಥ ಬಾಲವೀರನ ಕೂಡ ಯುದ್ಧ ಮಾಡುವುದು ಈ ದ್ರೋಣನಿಗೆ ಧರ್ಮವಲ್ಲ; ಮತ್ತು ಪುರುಷಾರ್ಥವಲ್ಲ. (ಹೋಗುವನು)

**ದುಶ್ಯಾ** .— (ಪ್ರವೇಶಿಸಿ) ಹೊರಟು ಹೋಗು? ಇನ್ನೆಲ್ಲಿ ಹೊರಟು ಹೋಗುವೆ? ಇನ್ನುಮೇಲೆ ಪ್ರಾಣದಾಸೆಯನ್ನು ಬಿಡು.

ಅಭಿ :— ಎಲೋ, ಹೋಗು, ಹೋಗು ನಿನ್ನಂತಹ ದುರಾತ್ಮನನ್ನು ಒಂದೇ ಕೈಯಿಂದ ಹೀಗೆ ತೂರಿ ಬಿಸಾಕುವೆನು.

**ದುಶ್ಯಾ** :— ಮೂರ್ತಿಯು ಚಿಕ್ಕದು, ಆದರೆ ಪರಾಕ್ರಮದ ಕೀರ್ತಿಯು

ದೊಡ್ಡದು, ಅಭಿಮನ್ಯು, ನೀನು ನನ್ನನ್ನು ಮನ್ನಿಸದಿದ್ದರೂ ನನ್ನ ಹಿರಿತನದ ಸಂಬಂಧವನ್ನಾದರೂ ಮನ್ನಿಸು.

**ಅಭಿ** :— ಹಿರಿತನದ ಸಂಬಂಧ— ? ಮನುಷ್ಯನು ಸ್ವಕಾರ್ಯಸಾಧನೆ ಕ್ಕೋಸುಗ ದುರಭಿಮಾನಕ್ಕೋಳಗಾಗಿ ಇಲ್ಲದ ಸಂಬಂಧವನ್ನು ಹಚ್ಚುವುದಕ್ಕೆ ಯತ್ನಿಸುವನು; ಅಲ್ಲದೆ ಅಂತಹ ಸಂಬಂಧವನ್ನು ಹಚ್ಚುವುವಕ್ಕೆ ಇಲ್ಲಿಯೇನು ಹೋಳಿಗೆ ತುಪ್ಪದ ಊಟವಿಲ್ಲ. ಇದು ರಣಾಂಗಣವಿದೆ. ಯುದ್ಧಮಾಡಿ ನಿನ್ನ ಪರಾಕ್ರಮವನ್ನು ತೋರಿಸು.

**ದುಶ್ಶಾ** :— ಏನು ಮಾಡಲಿ. ಬರೀ ಕೈಯಿಂದಲೇ ನಿನ್ನ ರುಂಡವನ್ನು ಹಿಂಡಿಬಿಡುತ್ತಿದ್ದೆನು; ಆದರೆ ನಿನ್ನಂತಹ ಚಿಕ್ಕ ಹುಡುಗನ ಮೇಲೆ ಕೈಯೆತ್ತು ವುದಕ್ಕೆ ಈ ಕೈಗಳಿಗೇ ನಾಚಿಕೆಯಾಗುವುದು.

**ಅಭಿ**:— ಜನಲಜ್ಜೆಯನ್ನು ಮನಲಜ್ಜೆಯನ್ನೂ ತಲೆಗೆಸುತ್ತಿ, ತುಂಬಿದ ಸಭೆಯಲ್ಲಿ, ನನ್ನ ದ್ರೌಪದೀ ಮಾತೆಯನ್ನು ನಗ್ನ ಮಾಡುವುದಕ್ಕೆ ಪ್ರಯತ್ನಿಸಿದ ದುಶ್ಶಾಸನನ ಪಾತಕೀ ಕೈಗಳಿಗೆ, ಈಗ ನಾಚಿಕೆ ಬರುವುದೇ ? ನಿರ್ಲಜ್ಜಾ, ದುರಾತ್ಮಾ, ನನ್ನ ಪರಮ ಪೂಜ್ಯ ಮಾತೆಯ ವಿಡಂಬನೆ ಮಾಡಿದ ನಿನ್ನ ಸೇಡನ್ನು ಈ ದಿವಸ ಅಭಿಮನ್ಯು ಹೀಗೆ ತೀರಿಸಿಕೊಳ್ಳುತ್ತಾನೆ–ನೋಡು (ಅವನ ಎದೆಯ ಮೇಲೆ ಹತ್ತಿ ಕೂಡುವನು) ಮಾತಾಡು, ಆ ಸತಿಯನ್ನು ಪಾಪ ದೃಷ್ಟಿಯಿಂದ ನೋಡಿದ ಈ ನಿನ್ನ ಪಾಪೀ ಕಣ್ಣುಗಳನ್ನು ಸಮೂಲವಾಗಿ ಕಿತ್ತಿ ಹೊರಗೆ ತೆಗೆಯಲೇ ? ಪತಿವ್ರತಾಶಿರೋಮಣಿಯ ಸೀರೆಯನ್ನು ಸೆಳೆಯುವ ದಕ್ಕೆ ಧಾವಿಸಿದ ನಿನ್ನ ಕೈಗಳನ್ನು, ತಿಂದು ತಿಂದು ಸೊಕ್ಕಿದ ಈ ದುಷ್ಟ ದೇಹ ದಿಂದ ಬೇರೆ ಮಾಡಿಬಿಡಲೆ ? ಆದರೆ ಬೇಡ-ನಿನ್ನ ನರಗಳ ರಕ್ತವನ್ನು ಕುಡಿ ಯುವುದಕ್ಕೋಸುಗ–ಭೀಮಸೇನ ಕಕ್ಕನು ಪ್ರತಿಜ್ಞೆ ಮಾಡಿರುವನು. ಆತನ ಪವಿತ್ರವಾದ ಪ್ರತಿಜ್ಞೆಗೆ ಅಡ್ಡವಾಗಿ ನಾನು ಬರುವದಿಲ್ಲ. ಹೋಗು ನಿನಗೆ ಜೀವದಾನ ಕೊಟ್ಟಿರುವೆನು.

**ದುಶ್ಶಾ** :— (ಸ್ವಗತ) ಈತನಿಗೆ ಬಾಲಕನೆಂದು ಯಾರು ಹೇಳುವರು? ಈತನು ಅಂತಕನ ಪ್ರಾಣಾಂತಕನು. (ಹೋಗುವನು)

**ಅಭಿ** :— (ನೋಡಿ) ಯಾರು ? ದುರ್ಯೋಧನನು, ಬನ್ನಿ ಬನ್ನಿ, ನಿಮ್ಮ ಸರ್ವರ ಮೂರ್ತಿಮಂತ ಮೃತ್ಯು ಇಲ್ಲಿ ಸಿದ್ಧನಾಗಿ ನಿಂತಿರುವನು.

**ದುರ್ಯೋ** :— (ಪ್ರವೇಶಿಸಿ) ಎಲ್ಲಿರುವನು ? ನನ್ನ ಪ್ರಿಯ ಕುಮಾರ

ನಾದ ಲಕ್ಷ್ಮಣನನ್ನು ಸಂಹರಿಸಿದ ಆ ಚಾಂಡಾಲ ಹುಡುಗನು ಎಲ್ಲಿರುವನು ?

**ಅಭಿ** :— ಇಕೋ ಇಲ್ಲಿಯೇ ನಿನ್ನ ಸಮ್ಮುಖದಲ್ಲಿ ಎದೆಗೊಟ್ಟು ನಿಂತಿರುವೆನು.

**ದುರ್ಯೋ** .— ಎಲೋ ಹುಡುಗಾ, ನಿನಗೆ ಮೃತ್ಯುವಿನ ಭಯವೇ ಇಲ್ಲವೇ ?

**ಅಭಿ** :— ಮೃತ್ಯುವಿನ ಭಯವು ಪಾಪಿಗಳಿಗೆ; ಹೇಡಿಗಳಾದ ದುಷ್ಟರಿಗೆ ! ಬಾಣದ ತುದಿಯ ಮೇಲೆ, ಕತ್ತಿಯ ಮೊನೆಯ ಮೇಲೆ ಕುಣಿದಾಡುವಂತಹ ವೀರನನ್ನು ನೋಡಿದ ಕೂಡಲೇ, ಮೃತ್ಯುವು ಭಯಪಟ್ಟು ಓಡಿ ಹೋಗುವುದು.

**ದುರ್ಯೋ** :— ಮೂರ್ಖಾ, ಸುಮ್ಮನೆ ನನ್ನಮುಂದೆ ಪ್ರತಿಷ್ಠೆಯನ್ನು ತೋರಿಸುವೆಯಾ ? (ಉಭಯತರಿಗೂ ಯುದ್ಧವಾಗಿ 'ದುರ್ಯೋಧನನು ನೆಲಕ್ಕೆ ಬೀಳುವನು) ಅಯ್ಯೋ ಅಯ್ಯೋ, ಬನ್ನಿರಿ ಯಾರಾದರೂ ನನ್ನ ಸಹಾಯಕ್ಕೆ ಬನ್ನಿರಿ !

**ಜಯ** :— (ತ್ವೇಷದಿಂದ ಪ್ರವೇಶಿಸಿ) ಇಗೋ ನೋಡು, ಈ ಜಯದ್ರಥನು ಆ ಹುಡುಗನನ್ನು ಮಣ್ಣು ಗಾಣಿಸುವುದಕ್ಕೆ ಸಿದ್ಧನಾಗಿ ಬಂದಿರುವನು. (ಭಯಪಟ್ಟು ಸ್ವಗತ) ಎಲಾ ಈ ಹುಡುಗನ ಭೀಕರವಾದ ಮೂರ್ತಿಯ ಕಡೆಗೆ ನನ್ನಿಂದ ನೋಡುವುದಕ್ಕೆ ಆಗುವುದಿಲ್ಲವಲ್ಲ. ಈ ಸಮಯದಲ್ಲಿ ಹೀಗೆ ಯುಕ್ತಿಯನ್ನು ಮಾಡಬೇಕು. (ಪ್ರಕಾಶ) ಭಾಪು ಭಾಪು, ಪರಾಕ್ರಮಶಾಲಿಯಾದ ಬಾಲವೀರನೆ, ಭಾಪು ಭಾಪು !

ಅಭಿ .—ಯಾಕೆ ಜಯದ್ರಥ ನಿನ್ನ ಆವೇಶವು ಎಲ್ಲಿಹೋಯಿತು ? ನಿನ್ನ ದುಷ್ಟತನವು ಎಲ್ಲಿ ಅಡಗಿತು?

**ಜಯ** :— (ಮೊಣಕಾಲೂರಿ) ನಾನು ನಿಮಗೆ ಶರಣುಬಂದಿರುವೆನು. ಶರಣಾಗತರಿಗೆ ಅಭಯ ಕೊಡುವುದು ವೀರರಿಗೆ ಭೂಷಣವಲ್ಲವೇ ?

**ಅಭಿ** — ನಿನಗೆ ಅಭಯ ಕೊಟ್ಟಿರುವೆನು; ಆದರೆ ಚಕ್ರವ್ಯೂಹದ ಹೊರಗೆ ಹೋಗುವ ಮಾರ್ಗವನ್ನು ಸರಿಯಾಗಿ ನನಗೆ ತೋರಿಸು.

**ಜಯ** :— (ಸ್ವಗತ) ಸ್ವಲ್ಪ ತಾಳು, ನಿನಗೆ-ಸ್ವರ್ಗದ ಮಾರ್ಗವನ್ನೇ ತೋರಿಸುತ್ತೇನೆ. (ಪ್ರಕಟ) ತೋರಿಸುತ್ತೇನೆ—ಆದರೆ ಕೈಯಲ್ಲಿರುವ ಧನುಸ್ಸು ಬಾಣಗಳನ್ನು ಮತ್ತು ಕತ್ತಿಯನ್ನು ಆಚೆಗೆ ದೂರವಾಗಿ ಚೆಲ್ಲು. ನನಗೆ ಭಯವಾಗುವುದು.

**ಅಭಿ** :— ಥೂ ಹೇಡಿಯೇ ! ಇದೋ ನಿನ್ನ ಮಾತುಗಳಮೇಲೆ ವಿಶ್ವಾಸವನ್ನಿಟ್ಟು ನನ್ನ ಶಸ್ತ್ರಾಸ್ತ್ರಗಳನ್ನು ಬಿಸಾಡುತ್ತೇನೆ. (ಹಾಗೆಮಾಡುವನು) ನಡೆಯಿನ್ನು.

**ಜಯು** :— ಇನ್ನೆಲ್ಲಿ ಹೋಗುವೆ ? ಬನ್ನಿರೋ, ಎಲ್ಲರೂ ಒಮ್ಮೆಲೆ ಬನ್ನಿರಿ ! ಈ ಹುಡುಗನನ್ನು ನೆಲಕ್ಕುರುಳಿಸಿರಿ.

(ಅಶ್ವಥ್ಥಾಮ, ಕರ್ಣ, ದುಶ್ಯಾಸನ ಮೊದಲಾದವರು ಬರುವರು)

**ಅಭಿ** :— ಎಲ, ಎಲಾ, ಘಾತವು ಘಾತವು ! ಷಂಢಾ ಜಯದ್ರಥಾ ನನ್ನನ್ನು ಹಿಡಿಯುವುದಕ್ಕೋಸುಗ ಕೊನೆಗೆ ನಿನಗೆ, ಇಂಥಾ ಕಪಟ ಕಾರಸ್ಥಾನವನ್ನೇ ಮಾಡಬೇಕಾಯಿತೆ ? ತನ್ನಿರಿ ತನ್ನಿರಿ ಯಾರಾದರೂ ನನ್ನ ಖಡ್ಗವನ್ನು ನನ್ನ ಕೈಗೆ ಕೊಡಿರಿ. ಈ ಕಪಟಿಗಳಾದ ರಾಕ್ಷಸರನ್ನು ಮಣ್ಣುಗೂಡಿಸುತ್ತೇನೆ

(ಬ್ರಹದ್ಬಲನನ್ನು ಕೊಂದುಹಾಕುತ್ತಾನೆ.)

**ದುರ್ಯೋ**:— ಎಲಾ ಎಲಾ, ಈ ಹುಡುಗನು ಮಾತಾಡುತ್ತಾ ಮಾತಾಡುತ್ತಾ ಆವೇಶದ ಭರದಲ್ಲಿ ಬ್ರಹದ್ಬಲನನ್ನು ಕೂಡಾ ಸಂಹರಿಸಿದನು. ಹಿಡಿಯಿರಿ ಈತನನ್ನು ಗಟ್ಟಿಯಾಗಿ ಹಿಡಿಯಿರಿ.

(ಮುತ್ತಿಗೆ ಹಾಕಿ ಭಾಲೆಗಳಿಂದ ಗುರಿಯಿಡುವರು)

**ಅಭಿ** :— ಭೀಮಕಕ್ಕಾ ! ಸಾತ್ಯಕಿ ! (ಕೂಗುವನು)

**ಜಯು** :— ಇನ್ನು ಬೇಕಾದಷ್ಟು ಒದ್ದಾಡು, ಚೀರಾಡು, ಇನ್ನುಮೇಲೆ ಯಾರೂ ಬರುವ ಹಾಗಿಲ್ಲ. ಈ ಬಹದ್ದೂರನು ಅವರನ್ನು ಆಗಲೇ ದೂರ ಓಡಿಸಿ ಬಂದಿರುವನು. ಹೂ. ಇನ್ನುಮೇಲೆ ದೇವರ ನಾಮಸ್ಮರಣೆಯನ್ನು ಮಾಡು.

**ಅಭಿ** :— ಹಾಯ್ ಹಾಯ್ ನಾಲ್ಕೂ ಕಡೆಯಿಂದ ದುರ್ದೈವವು ನನಗೆ ಮುತ್ತಿಗೆ ಹಾಕಿತು. ಆಚಾರ್ಯರೇ ಆಚಾರ್ಯರೇ, ಇದು ನಿಮಗೆ ಧರ್ಮವೇ ? ಮಾತಾಡಿರಿ, ಆಚಾರ್ಯರೇ ಇಂತಹ ವಿಶ್ವಾಸಘಾತದಿಂದ ನನಗೆ ಮರಣ ಬರುವುದು, ನಿಮ್ಮ ಧರ್ಮಬುದ್ಧಿಗೆ ಯೋಗ್ಯವೆನಿಸುವುದೆ ? ಆಚಾರ್ಯರೆ, ಮಾತಡಿರಿ, ಸುಮ್ಮನೆ ಏಕೆ ನಿಂತಿರುವಿರಿ.

**ದ್ರೋಣ** :— ಹಾ ಎಚ್ಚರಿಕೆ ! ನೀಚರಾಕ್ಷಸರೇ, ಇದು ವಿಶ್ವಾಸಘಾತಕವು, ಅಧರ್ಮತನವು, ಅತ್ಯಾಚಾರವು ! ಧಿಕ್ಕಾರ ಧಿಕ್ಕಾರವಿರಲಿ. ನಿಮ್ಮ

ಶೌರ್ಯಕ್ಕೆ ! ನಿರ್ಲಜ್ಜರಾದ ನಪುಂಸಕರೇ, ಒಬ್ಬ ವೀರ ಬಾಲಕನನ್ನು ವಿಶ್ವಾಸಘಾತದಿಂದ ಸಂಹರಿಸುವುದಕ್ಕೆ ಪ್ರಯತ್ನ ಮಾಡುವಿರಾ ! ಇಂತಹ ಘಾತಕವು ನಿಮ್ಮ ಕುಲವನ್ನು ನಾಶಮಾಡದೆ ಬಿಟ್ಟೀತೆ ?

**ಜಯ :**— ಆಚಾರ್ಯರೇ, ಈ ನಿಮ್ಮ ಪಾಪ ಪುಣ್ಯದ ಪುರಾಣವನ್ನು ನಾಶಮಾಡಿರಿ. ನಿಮ್ಮಿಂದ ಇಂತಹ ಪ್ರಸಂಗವನ್ನು ನೋಡುವುದಕ್ಕಾಗ ದಿದ್ದರೆ, ಮುಖವನ್ನು ಕಪ್ಪುಮಾಡಿಕೊಂಡು ಹೊರಟು ಹೋಗಿರಿ.

**ದ್ರೋಣ :**— ಹಾಯ್ ದುರ್ದೈವವೇ ಈ ದುಷ್ಟರ ಸಹವಾಸದಿಂದ ಇಂತಹ ಘೋರ ಕೃತ್ಯವನ್ನು ನಾನು ನೋಡಬೇಕಾಯಿತು. ಧಿಕ್ಕಾರ ಧಿಕ್ಕಾರ ವಿರಲಿ ನನ್ನ ಜನ್ಮಕ್ಕೆ

**ಅಭಿ :**— ಆಚಾರ್ಯರೆ, ನಿಮ್ಮ ಕಣ್ಣೆದುರಿಗೆ ನಡೆದ ಈ ಘೋರ ರಾಕ್ಷಸಿ ಕೃತ್ಯವನ್ನು ನೋಡುತ್ತ ನೀವು ಸುಮನೆ ನಿಂತಿರುವಿರಿ. ಇದು ನಿಮಗೆ ಧರ್ಮವೇ ? ಮಾತಾಡಿರಿ. ಆಚಾರ್ಯರೆ, ಇಂತಹ ವಿಶ್ವಾಸ ಘಾತದಿಂದ ನನಗೆ ಮರಣ ಬರುವುದು—ನಿಮ್ಮ ಧರ್ಮ ಬುದ್ಧಿಗೆ ಯೋಗ್ಯವೆನಿಸುವುದೆ? ಆಚಾರ್ಯರೆ, ಆಚಾರ್ಯರೆ, ಮಾತಾಡಿರಿ ಸುಮ್ಮನೆ ಏಕೆ ನಿಂತಿರುವಿರಿ.

**ದ್ರೋಣ :**— ವತ್ಸಾ, ಈ ಸಮಯದಲ್ಲಿ ನ್ಯಾಯದಿಂದ, ಧರ್ಮದಿಂದ ಸತ್ಯದಿಂದ ಮಾತಾಡುವದಕ್ಕೆ, ಈ ದ್ರೋಣಾಚಾರ್ಯನ ನಾಲಿಗೆಯು ನಿರ್ಮೂಲವಾಗಿ ಹೋಗಿದೆ ? ಆ ನಾಲಿಗೆಯು ಈ ಕೌರವರ ಪಾಪಮಯ ವಾದ ಅನ್ನವನ್ನು ತಿಂದು ಸುಟ್ಟು ಬೂದಿಯಾಗಿ ಹೋಗಿದೆ ! ಕುಮಾರಾ, ನೀನು ಹೇಗೆ ಚಕ್ರವ್ಯೂಹದಲ್ಲಿ ಸಿಕ್ಕಿರುವೆಯೊ, ಹಾಗೆ ನಾನಾದರೂ ಮೂರ್ತಿ ಮಂತ ಅಧರ್ಮ ಅನಾಚಾರದ ಪ್ರಭುಗಳಾದ ಈ ಚಾಂಡಾಲರ ಗುಲಾಮ ಗಿರಿಯ ಚಕ್ರವ್ಯೂಹದಲ್ಲಿ ಸಿಕ್ಕಿರುವೆನು. ಈ ಸಮಯದಲ್ಲಿ ನಾವೀರ್ವರೂ ಅನಾಥರು, ಸಹಾಯರಹಿತರು !

**ಜಯದ್ರಥ :**— ಯಾಕೆ ಆಚಾರ್ಯರೆ, ನಿವೇಕವು ನಿಮ್ಮ ನಾಲಿಗೆ ಯನ್ನು ಮುತ್ತಿತೇ ?

**ದ್ರೋಣ :**— ಕೃತಕರ್ಮದ ಪ್ರಾಯಶ್ಚಿತ್ತವು—ನನ್ನನ್ನು ಮೂಕ ನನ್ನಾಗಿ ಮಾಡಿತು; ಕೌರವರ ಪಾಪಮಯ ಅನ್ನವನ್ನು ಸೇವಿಸದೆ ಇದ್ದಿದ್ದರೆ, ಈ ದ್ರೋಣಾಚಾರ್ಯನಿಗೆ ಇಂತಹ ಅಧರ್ಮದ ಕೊಲೆಯನ್ನು ನೋಡಿ

ಅಂತಃಕರಣಶೂನ್ಯನಾಗಿ ಬೋರ್ಗಲ್ಲಿನಂತೆ ಹೀಗೆ ನಿಲ್ಲುವ ಪ್ರಸಂಗವೇ ಬರುತ್ತಿರಲಿಲ್ಲ. ದುರ್ಯೋಧನಾ, ನಿನ್ನ ಕಲ್ಯಾಣದ ವಿಷಯವನ್ನು ಹೇಳುತ್ತೇನೆ- ಇಂತಹ ಕಪಟದಿಂದ ಈ ಕುಮಾರನ ಕೊಲೆಯನ್ನು ಮಾಡಬೇಡ. ರೌರವ ನರಕಕ್ಕೆ ಗುರಿಯಾಗಬೇಡ.

**ದುರ್ಯೋಧನ** :— ಅಂದರ, ಈ ಸರ್ಪದ ಮರಿಯನ್ನು ಜೀವಂತ ಬಿಡೋಣವೆ ?

**ದ್ರೋಣ** :— ಎಲೋ, ಇದು ಸರ್ಪದ ಮರಿಯಲ್ಲ :—ಪರಾಕ್ರಮಿಯಾದ ಸಿಂಹದ ಮರಿಯು. ಇಂತಹ ರಾಕ್ಷಸೀ ಕೃತಿಯನ್ನು, ಮಾಡಿ ನಿಮ್ಮ ಶೌರ್ಯಕ್ಕೆ ಮತ್ತು ನಿಮ್ಮ ಕುಲಕ್ಕೆ ಕುಂದು ತರಬೇಡಿರಿ. ದುರ್ಯೋಧನಾ. ಕೊಡು, ಅಭಿಮನ್ಯುವಿಗೆ ಜೀವದಾನವನ್ನು ಕೊಡು.

**ಜಯು** :— ಏಕೋ ಹುಡುಗಾ, ನಿನಗೆ ಜೀವದಾನವು ಬೇಕೆ ?

**ಅಭಿ** :— ಇಲ್ಲ ಕಾಲತ್ರಯಕ್ಕೂ ಪ್ರಾಣಭಿಕ್ಷೆಯನ್ನು ಬೇಡಲಾರೆನು. ಪ್ರಾಣಭಿಕ್ಷೆಯನ್ನು ಬೇಡುವುದು, ಕ್ಷತ್ರಿಯನಾದವನಿಗೆ ಪುರುಷಾರ್ಥವಲ್ಲ. ಈ ಅಭಿಮನ್ಯುವನ್ನು, ನೀವು ಯಾರೆಂದು ತಿಳಿದಿರುವಿರಿ ? ಈ ಪಾರ್ಥಪುತ್ರನು ದುಷ್ಟರ ಕೃಪಾಪೇಕ್ಷೆಯನ್ನು ಸರ್ವಥಾ ಮಾಡಲಾರನು.

**ದ್ರೋಣ** :— ಭಾಪು, ಭಾಪು, ಅಭಿಮನ್ಯುವೆ ! ನೀನು ನಿಶ್ಚಯವಾಗಿ ಸಮರಕೇಸರಿಯ ವೀರಪುತ್ರನಾಗಿ ಶೋಭಿಸುವೆ. ನಿನ್ನನ್ನು ಹೆತ್ತ ಆ ನರಕೇಸರಿಯು ಧನ್ಯನು.

**ದುರ್ಯೋ** :— (ತ್ವೇಷದಿಂದ) ನರಕೇಸರಿಯೆ ? ಯಾವನವನು-- ಆ ಅರ್ಜುನನೇ ? ಆಚಾರ್ಯರೆ, ಜೋಕೆ ಇನ್ನೊಂದು ಸಲ ಆ ಮರ್ಕಟನಿಗೆ ಕೇಸರಿಯೆಂದು ಉಚ್ಚರಿಸಿದರೆ, ಬಹಳ ಪ್ರಮಾದವಾದೀತು ! ಕೇಸರಿಯಂತೆ ಕೇಸರಿ ! ಈ ಶಬ್ದಗಳನ್ನು ಕೇಳಿದ ಕೂಡಲೆ, ನನ್ನ ಸರ್ವಾಂಗವು ತಪ್ತವಾಗಿ ಹೋಗುವದು.

**ದ್ರೋಣ** :-- ಆ ಕೇಸರಿಯ ಯೋಗ್ಯತೆಯು ನಿಮ್ಮಂತಹ ಕಾಡು ನರಿಗಳಿಗೆ ಹೇಗೆ ತಿಳಿಯುವದು ? ಆ ನರಕೇಸರಿಯು ಈ ಸಮಯದಲ್ಲಿ ಇಲ್ಲಿ ಬಂದಿದ್ದರೆ, ಇಂತಹ ಸೊಕ್ಕಿನ ಶಬ್ದಗಳನ್ನು ಮಾತಾಡುವುದಕ್ಕೆ—ನೀವು ಈ ಜಗತ್ತಿನಲ್ಲಿ ಜೀವಂತವಾಗಿ ಉಳಿಯುತ್ತಿರಲಿಲ್ಲ. ದುರ್ಯೋಧನಾ, ಅವನಿ

ಗೋಸುಗವಾಗಿ ನಾನು ನಿನಗೆ ಭಿಕ್ಷೆ ಬೇಡುತ್ತೇನೆ. ನನ್ನ ಮಾತುಗಳನ್ನು ಕೇಳಿ ಈ ಅಭಿಮನ್ಯುವಿಗೆ ಪ್ರಾಣದಾನವನ್ನು ಕೊಡು.

**ದುರ್ಯೋ :** — ಅಭಿಮನ್ಯು ಹೇಳು, ನಿನಗೆ ಯಾವ ದಾನವು ಬೇಕು ? ಜೀವದಾನದ ಭಿಕ್ಷೆಯು—

**ಅಭಿ** :-- ಬೇಡ ನನಗೆ ಸರ್ವಥಾ ಬೇಡ, ನೀವು ವೀರ ವಂಶದಲ್ಲಿ ಜನ್ಮಿಸಿದ್ದರೆ ವೀರರಿಗೆ ಉಚಿತವಾದ ದಾನವನ್ನು ನನಗೆ ಕೊಡಿರಿ. ನನ್ನ ಖಡ್ಗವನ್ನು ಧನುಷ್ಯ ಬಾಣಗಳನ್ನು ನನ್ನ ಕೈಯಲ್ಲಿ ಕೊಟ್ಟು, ಸಮರಾಂಗಣ ದಲ್ಲಿ ವೀರರಂತೆ ನನ್ನ ಕೂಡ ಯುದ್ಧ ಮಾಡುವುದಕ್ಕೆ ಸಿದ್ಧರಾಗಿರಿ. ಇದೇ ದಾನವು ನನಗೆ ಬೇಕು.

**ಜಯ :**— ಇನ್ನುಮೇಲೆ ಆ ದಾನವನ್ನು ಕೊಡುವುದಕ್ಕೆ ನಾವೇನು ಅಷ್ಟು ಮೂರ್ಖರಲ್ಲ ತಿಳಿಯಿತೆ ?

**ಅಭಿ :**— ಥೂ ಥೂ, ನಿಮ್ಮ ಶೌರ್ಯಕ್ಕೂ ಪರಾಕ್ರಮಕ್ಕೂ ಧಿಕ್ಕಾರ ವಿರಲಿ. ಇದೋ ನೋಡು, ಈ ಅಭಿಮನ್ಯುವು ಬರೀ ಅಂಗ ಸಾಮರ್ಥ್ಯ ದಿಂದಲೇ ನಿಮ್ಮನ್ನು ಸಂಹರಿಸುವನು.

**ದುಶ್ಯಾ :**— ಸಾಕು, ಸಾಕುಮಾಡು ಬಡಬಡಿಕೆಯನ್ನು ! ನಡೆ ಇನ್ನು ಪರಲೋಕಯಾತ್ರೆಗೆ ! ( ಎಲ್ಲರೂ ಕೂಡಿ ಅವನನ್ನು ಹೊಡೆಯುವರು. ಅಭಿಮ ನ್ಯುವು ಘಾಯವಾಗಿ ಬೀಳುವನು.)

**ಅಭಿ** :— ಹಾಯ್ ಹಾಯ್ ! ಕೊನೆಗೆ ಈ ದುಷ್ಟರ ಕಪಟ ಕಾರ ಸ್ಥಾನಕ್ಕೆ ಬಲಿಬೀಳಬೇಕಾಯಿತೇ ? ಆಚಾರ್ಯರೆ-ಆಚಾರ್ಯರೆ—

**ದ್ರೋಣ** :-- (ಹಣೆಬಡಿದುಕೊಂಡು) ಧಿಕ್ಕಾರವಿರಲಿ, ಈ ಆಚಾರ್ಯನ ಅಧಮ ವೃತ್ತಿಗೆ ! ಧಿಕ್ಕಾರವಿರಲಿ, ನನ್ನೀ ದಾಸ್ಯತ್ವದ ಪಾಪಿ ಜೀವನಕ್ಕೆ !

**ಅಭಿ** :-- (ಒದ್ದಾಡುತ್ತ) ಪಂಚಮಹಾಭೂತಗಳಿರಾ, ನಾನು ಹೋಗು ವೆನು-ಹೋಗುವೆನು. ಈ ಅತ್ಯಾಚಾರಿಗಳಾದ ಅಧಮರು ಕೇವಲ ಕಪಟ ತನದಿಂದ ನನ್ನನ್ನು ಸಂಹಾರ ಮಾಡಿದರು. ಇದಕ್ಕೆ ನೀವೇ ಸಾಕ್ಷಿ; ಆದರೆ ಈ ಅಭಿಮನ್ಯುವು ಮಾತ್ರ, ತನ್ನ ಶೌರ್ಯವನ್ನು ಶಿಖರಕ್ಕೆ ಮುಟ್ಟಿಸಿದನು.

**ಜಯ** :— ಎಲೋ ಮೂರ್ಖಾ, ಸಾಯುವ ಕಾಲಕ್ಕೆ ಹೀಗೇಕೆ ಕಂಠಶೋಷ ಮಾಡಿಕೊಳ್ಳುವೆ ? ಇನ್ನು ಸುಖದಿಂದ ಪ್ರಾಣಬಿಡು. ನನ್ನ ಸೇಡು ನಾನು ತೀರಿಸಿಕೊಂಡೆನು. ( ಮಸ್ತಕಕ್ಕೆ ಒದೆಯುವನು)

**ಅಭಿ** :— ಹಾಯ್ ಹಾಯ್ ! ಮಸ್ತಕಕ್ಕೆ ಪಾದ ಪ್ರಹಾರವು ! ಜಯದ್ರಥಾ ಈ ಪ್ರಹಾರವು ನನ್ನನ್ನು ಸ್ವರ್ಗಕ್ಕೆ ಏರಿಸುವುದು. ಆದರೆ ನಿನ್ನನ್ನು ಮಾತ್ರ ಪ್ರಾಣಸಂಕಟಕ್ಕೆ ಗುರಿಮಾಡುವುದು. ರೌರವ ನರಕವನ್ನು ಕಾಣಿಸುವುದು. ಇದನ್ನು ಮಾತ್ರ ಲಕ್ಷ್ಯದಲ್ಲಿಡು. ತಂದೆಯೇ ! ಅವಮಾನವು ! ನೋಡು ತೀರಿಸು !

**ದ್ರೋಣ** :— ಎಲ ಎಲಾ, ನಿಮ್ಮ ದುರಾಚಾರವು ಶಿಖರಕ್ಕೆ ಮುಟ್ಟಿತು. ಜಯದ್ರಥಾ, ಗಾಯಾಳುವಾದ ಸಿಂಹದ ಮರಿಗೆ ಮಾಡಿದ ಲತ್ತಾ ಪ್ರಹಾರವು ನಿನ್ನ ವಂಶವನ್ನು ನಾಶಮಾಡದೆ ಎಂದಿಗೂ ಬಿಡಲಾರದು. ಈ ಅಭಿಮನ್ಯುವಿನ ರಕ್ತದ ಒಂದೊಂದೇ ಬಿಂದುಗಳಿಂದ ಅಸಂಖ್ಯ ವೀರಅಭಿಮನ್ಯುಗಳು ಈ ಭರತಖಂಡದಲ್ಲಿ ಹುಟ್ಟುವರು; ಮತ್ತು ದುರ್ಯೋಧನನಂತಹ ರಾಕ್ಷಸೀ ಕೃತ್ಯಮಾಡುವ ನೀಚ ರಾಜರನ್ನು ರಸಾತಲಕ್ಕೆ ಮೆಟ್ಟದೆ ಎಂದೂ ಬಿಡಲಾರರು.

**ಅಭಿ** :— ಆಚಾರ್ಯರೆ, ನನ್ನ ಅಂತ್ಯಕಾಲದ ಸತ್ಯಸಂದೇಶವೂ ಇದೇ ಆದು ! ನಿಮ್ಮ ಮುಖದಿಂದ ಹೊರಬಿತ್ತು. ಆ–ಚಾ–ರ್ಯ–ರೇ–ಪ್ರ–ಣಾ–ಮ–ವು—ಶ್ರೀ— ಕೃ–ಷ್ಣಾ —ಅ–ಪ್ಪಾ— ಅ–ಮ್ಮಾ—ಪ್ರಿ–ಯೇ–ಉ–ತ್ತ–ರೆ ಶ್ರೀ—ಕೃಷ್ಣಾ— ! ಮೃತನಾಗುವನು)

**ಜಯ** :— (ಆನಂದದಿಂದ) ಹೋದನು, ಹೋದನು. ಸಿಂಹಾರ್ಭಕನು ಮೃತ್ಯುವಿನ ಬಾಯಿಗೆ ಬಲಿಯಾದನು.

**ದ್ರೋಣ** :— ಜಯದ್ರಥ, ಈ ವೀರ ಕಂಠೀರವ ಕುಮಾರನ ಸ್ವರೂಪದಲ್ಲಿ ಅಡಗಿದ್ದ ನಿಮ್ಮ ಪೂರ್ವಪುಣ್ಯ ತೇಜೋರಾಶಿಯು, ಈ ನಿನ್ನ ಲತ್ತಾ ಪ್ರಹರದಿಂದ ಬುಡಸಹಿತವಾಗಿ ಹಾಳಾಗಿ ಹೋಯಿತು.

( ಅಭಿಮನ್ಯುವಿನ ತಲೆಯ ಮೇಲೆ ಜಯದ್ರಥನು ಕಾಲಿಟ್ಟುಕೊಂಡು ಹಸನ್ಮುಖನಾಗುವನು. ಕೌರವ ಸಪ್ತ ವೀರರು ಹೆಣದಮೇಲೆ ಭಾಲೆಗಳನ್ನೂರುವರು. ದ್ರೋಣಾಚಾರ್ಯರು ಹತಾಶರಾಗಿ ಮುಖ ತಿರುವಿಕೊಂಡು ನಿಲ್ಲುವರು. ಅಭಿಮನ್ಯುವಿನ ಮೇಲೆ ದೇವತೆಗಳು ಹೂಮಳೆಗರೆಯುವರು.)

## ( ದ್ವಿತೀಯಾಂಕ ಸಮಾಪ್ತ )

# ಮೂರನೆಯ ಅಂಕು

## ಒಂದನೆಯ ಪ್ರಸಂಗ

(ಸ್ಥಳ :— ಅಡವಿಯ ದಾರಿ, ಶ್ರೀಕೃಷ್ಣ, ಅರ್ಜುನರು ಪ್ರವೇಶಿಸುವರು)

**ಅರ್ಜುನ** :— ಭಗವಾನ್ ಬಲಾಢ್ಯವೀರರಾದ ಸಂಶಪ್ತಕರ ಕೂಡ ಯುದ್ಧವನ್ನು ಮಾಡಿ ವಿಜಯವನ್ನು ಸಂಪಾದಿಸಿದ ವಿಷಯವಾಗಿ ಈ ದಿವಸ ನನ್ನಮನಸ್ಸಿಗೆ ಮಿತಿಮೀರಿ ಆನಂದವಾಗಿದೆ. ಆದರೆ ದೇವಾ, ಈ ಆನಂದವು ತಮ್ಮ ಕೃಪಾಪ್ರಸಾದದಿಂದಲೇ ಲಭಿಸಿತಲ್ಲದೆ, ಇನ್ನಾವುದರಿಂದಲೂ ಅಲ್ಲ.

**ಕೃಷ್ಣ** :— ಅರ್ಜುನಾ, ನಿನ್ನ ಆನಂದಕ್ಕೆ ಸಹಾಯಕರ್ತನು ನಾನಿದ್ದರೂ, ನಿನ್ನ ಕೀರ್ತಿಯ ಪಾಲುಗಾರನು ಮಾತ್ರ-ನಾನು ಖಂಡಿತವಾಗಿಯೂ ಅಲ್ಲ, ನನ್ನದೆಂತಹ ಕೃಪೆಯು ! ನಿನ್ನ ಪರಾಕ್ರಮವೇ ನಿನಗೆ ಜಯವನ್ನು ಸಂಪಾದಿಸಿಕೊಟ್ಟಿರುವುದು. ನೀನು ನಿಜವಾದ ಪರಾಕ್ರಮಶಾಲಿಯು, ಮಹಾರಥಿಕನು. ನಾನೇನು ಹೇಳಿ ಕೇಳಿ ನಿನ್ನ ಸಾರಥಿ !

**ಅರ್ಜುನ** :— ಬೇಡ ಬೇಡ, ಭಗವಾನ್ ಇಂತಹ ಮರ್ಮಭೇದಕವಾದ ಶಬ್ದಗಳಿಂದ, ನನ್ನನ್ನು ನೋಯಿಸಬೇಡ. ದೇವಾ ಈ ಪಾಂಡವರ ಪರಾಕ್ರಮವು-ನಿನ್ನ ಕೃಪೆಯ ಬೆಂಬಲವು ಇಲ್ಲದಿದ್ದರೆ—

**ಕೃಷ್ಣ** :— ಅರ್ಜುನಾ, ನಾನು ನಿಶ್ಚಯವಾಗಿಯೂ ಪಾಂಡವರ ಪಕ್ಷಪಾತಿಯಲ್ಲ; ಆದರೆ ಅವರ ಸತ್ಯನಿಷ್ಠೆಗೂ, ಭಾವಭಕ್ತಿಗೂ ಮೆಚ್ಚಿ, ಅವರ ಕಿಂಕರನಾಗಿರುವೆನು. ಈ ಕೃಷ್ಣನು, ಯಾವಾಗಲೂ ನಿರ್ಮಲವಾದ ಭಕ್ತಿ, ಯನ್ನೇ ಅಪೇಕ್ಷಿಸುವನು.

**ಅರ್ಜುನ** :— ದೇವಾ, ತಮ್ಮ ಮಂಗಲಕರವಾದ ವರದ ಹಸ್ತವು ಈ ಪಾಂಡವರ ತಲೆಯ ಮೇಲೆ ಚಿರಕಾಲವಿರಬಹುದಲ್ಲವೇ ?

**ಕೃಷ್ಣ** :— ಹುಚ್ಚಾ ಇಂಥ ವಿಪರೀತ ಸಂಶಯವು, ನಿನ್ನ ಮನಸ್ಸಿನಲ್ಲಿ ಹೇಗೆ ಬಂತು ? ಈ ನನ್ನ ಭಕ್ತವತ್ಸಲ ಹಸ್ತವು, ದುಷ್ಟರ ಸಂಹಾರಕ್ಕೋಸುಗ

ಹಾಗೂ ಧರ್ಮ ನೀತಿಯ ಉದ್ಧಾರಕ್ಕೋಸುಗವೇ ಇರುವುದು

ರಾಗ ಖಮಾಜ, ತಾಳ ಝಂಪಾ

ಭಕ್ತಿಪರಿಪಾಲನ । ಸತ್ಯಮಮ ಜೀವನಾ ॥ ಪಲ್ಲ ॥
ಭಕ್ತಾಪರಾಧಗಳ । ನೆಣಿಸದಲೆ ಕ್ಷಮಿಸುತೇ ।
ಸಕಲ ಸೌಭಾಗ್ಯದಾ । ಸೌಖ್ಯವ ನಾ ನೀವೆ ॥ ೧ ॥

ಆದರೆ ಅರ್ಜುನಾ, ಒಮ್ಮೆಲೆ ನಿನ್ನ ಮುಖಮುದ್ರೆಯು ನಿಸ್ತೇಜವಾಯಿತು; ಮತ್ತು ನಿನ್ನ ಆನಂದ ವೃತ್ತಿಯು ನಾಶವಾದಂತೆ ತೋರುತ್ತಿರುವದು; ಕಾರಣವೇನು !

**ಅರ್ಜುನ** —— ಅದೇನು ಕಾರಣವೋ ನನಗೆ ಹೇಳಲಿಕ್ಕೆ ಬರುವಂತಿಲ್ಲ; ಆದರೆ ಆಕಲ್ಪಿತವಾಗಿ ಮನಸ್ಸಿಗೆ ಪೆಟ್ಟು ತಗಲಿದಂತಾಗಿ, ನನ್ನ ಉತ್ಸಾಹವು ಕುಗ್ಗಿ, ಉದಾಸೀನತೆಯು ಹೆಚ್ಚುತ್ತ ನಡೆದಿರುವದು. ಏನಾದರೂ ಘೋರವಿಪತ್ತು—

ರಾಗ ಮಾರವಾ, ತಾಳ ತ್ರಿಪುಟ

ಸಂತೋಷ ಮನ । ಚಿಂತಾತುರದೇ । ಭ್ರಾಂತವಾದು ದೈಯ್ಯಾ ॥ ಪಲ್ಲ ॥
ಮಿತಿಮೀರಿದ ಈ ಅಪಶಕುನಗಳಾ । ಅತಿ ಸಂತಾಪದ ।
ಬಾಧೆಯು ಸಹಿಸೇ । ಗತಿಯು । ಮುಂದಕೆ । ನಾ ಕಾಣೆ । ೧ ॥

**ಕೃಷ್ಣ** :— ಅರ್ಜುನಾ, ಮನುಷ್ಯನ ಮನಸ್ಸಿನ ರಚನೆಯೇ ಹೀಗೆ, ರಹಸ್ಯ ಪೂರ್ಣವಾಗಿದೆ. ಆನಂದ--ವಿಷಾದಗಳ ಭಾವೀ ಬರುವಿಕೆಯನ್ನು ಅವರ ಮನಸ್ಸು ಅವರಿಗೆ ಮುಂದಾಗಿಯೇ ಸೂಚಿಸುವುದು.

**ಅರ್ಜುನ** .— ಅದೋ, ನೋಡಿದೆಯಾ, ನಮ್ಮ ಬಿಡಾರವು ಸ್ಮಶಾನದಂತೆ ಹೇಗೆ ಅವಲಕ್ಷಣವಾಗಿ ತೋರುತ್ತಿರುವುದು ! ನನ್ನ ವಿಜಯವಾರ್ತೆಯಿಂದ ಯಾವ ಸ್ಥಳದಲ್ಲಿ ಆನಂದವೇ ಆನಂದವಾಗಿ ಹೋಗಬೇಕೋ, ಆ ಸ್ಥಳದಲ್ಲಿ ಈ ಕಾಲಕ್ಕೆ ಹೀಗೆ ಸ್ಮಶಾನದಂತೆ, ದುಃಖ ಸೂಚಕವಾದ ಅಸ್ವಸ್ಥತೆಯು ಪಸರಿಸಬೇಕೇ ? ಬೇಡ ! ಹೃದಯವನ್ನು ಭೇದಿಸುವಂತಹ ಕಠೋರ ಕಲ್ಪನೆಯನ್ನೇ ನಾನು ಸಹಿಸಲಾರೆನು. ಚಕ್ರವ್ಯೂಹ ! ಅಭಿಮನ್ಯು ! ನಡೆ, ಕೃಷ್ಣಾ ಈ ಸ್ಥಳದಲ್ಲಿ ನನಗೆ ಒಂದು ನಿಮಿಷವೂ ನಿಲ್ಲುವುದಕ್ಕೆ ಮನಸ್ಸಾಗುವುದಿಲ್ಲ. ಇಲ್ಲಿಲ್ಲದ ಕಲ್ಪನೆಗಳಿಂದ ನನ್ನ ಮನಸ್ಸು, ವಿಷಾದಪೂರ್ಣವಾಗುತ್ತಿರುವುದು.

ಕೃಷ್ಣ :— ಎಲೋ, ಸುಮ್ಮನೆ ಹೀಗೇಕೆ ಭಯಪಟ್ಟು ಧೈರ್ಯಹೀನ ನಾಗುವೆ ? ವೀರರ ವಜ್ರಹೃದಯವು ಎಷ್ಟು ಕಠೋರವೋ ಅಷ್ಟೇ ಕೋಮಲವು, ಮುಂಗೋಪಿಯೂ, ಸಾತ್ವಿಕವೂ ಇರುವುದೆಂಬುದು ಸುಳ್ಳಲ್ಲ.ಅರ್ಜುನಾ, ಎಂತಹ ಪ್ರಸಂಗ ಬಂದರೂ ಮನುಷ್ಯನು ತನ್ನ ವಿವೇಕ ವೃತ್ತಿಯನ್ನು ಅತಿಕ್ರಮಿಸಿ ಹೋಗಬಾರದು. ಮನುಷ್ಯನು ಬರುವ ಸುಖದುಃಖಗಳ ಸ್ವಾಗತಕ್ಕಾಗಿ ಸಮಬುದ್ಧಿಯಿಂದ ವಿಚಾರಮಾಡಿ, ಅನುಭೋಗಿಸುವುದೇ ಸಂಸಾರಕ್ಕೆ ಶ್ರೇಯಸ್ಕರವಾಗಿದೆ.

ರಾಗ ಮಿಯಾಮಲಾರ, ತಾಳ ತ್ರಿವಟ

ಈ ಭವಸಾಗರದೇ | ಸಮಭಾವ ಮನಕೆ ಶಾಂತಿ || ಪಲ್ಲ ||
ವಿಕಾರ ಮತಿಗೆ | ವಶವಾಗಿರದೆ | ಶೋಕ ತಾಪಕೇ |
ವ್ಯಸನ ಗೈಯ್ಯದೇ || ಏಕ ಬಾವದೀ ಎನ್ನ ಭಜಿಸುತವ |
ಲೋಕದೊಳುತ್ತಮನೇ ಪಾರ್ಥ || ೧ ||

(ಹೋಗುವರು. ಎರಡನೆಯ ಬದಿಯಿಂದ ಉತ್ತರಾ, ಸೌದಾಮಿನಿಯರು ಬರುವರು)

**ಉತ್ತರಾ** :— ಸೌದಾಮಿನಿ, ಬಿಡು ನನ್ನನ್ನು ! ಮತ್ತು ನೀನು ಬಿಡಾರಕ್ಕೆ ಹೋಗು.

**ಸೌದಾ** .— ದೇವಿಯವರೆ ತಾವು ಎತ್ತ ಕಡೆಗೆ ಹೋಗುವಿರಿ ?

**ಉತ್ತರಾ** :— ಎತ್ತ ಕಡೆಗೆ ! ಅಂದರೆ, ನನಗೆತ್ತ ಮಾರ್ಗವು ತೋರುವುದೋ ಅತ್ತ ಕಡೆಗೆ ಹೋಗುವೆನು. ಸೌದಾಮಿನಿ, ಈ ಯುದ್ಧವು ಇನ್ನೂ ಮುಗಿಯಲಿಲ್ಲವೇನು ? ಸಾಯಂಕಾಲದ ಸಮಯವು ಮೀರಿ ಕತ್ತಲೆಯಾಯಿತು. ಸ್ವಾಮಿಯು ಇನ್ನೂ ವರೆಗೂ ಬಿಡಾರಕ್ಕೆ ಯಾಕೆ ಬರಲಿಲ್ಲ ? ಛೆ ! ಛೆ! ನಾನಾತರದ ವಿಚಾರತರಂಗಗಳು ನನ್ನ ಮನಸ್ಸನ್ನು ಭಯಪಡಿಸುತ್ತಿರುವವು.

ರಾಗ ಗಾರಾ, ತಾಳ ದಾದರಾ

ಕಾಣದೆ ಚಾರುಪತಿಯ ಮುಖ | ಮನದಿ ನಾ ಮರಗುವೆ |
ಸಹಿಸೆ ವಿರಹತಾಪ　　|| ಪಲ್ಲ ||
ಚಣಚಣಕೆ ತಳಮಳಿಸುವೆ | ಮತಿಯು ಭ್ರಾಂತವಾಯಿತೆ　　|| ೧ ||

**ಸೌದಾ** :– ದೇವಿ, ತಾವು ಬಿಡಾರದಲ್ಲಿಯೇ ಮಾರ್ಗ ನಿರೀಕ್ಷಣ ಮಾಡುತ್ತ ಕುಳಿತುಕೊಳ್ಳಿರಿ. ಸ್ವಾಮಿಯವರು ಇಷ್ಟರಲ್ಲಿಯೇ ದಯಮಾಡಿನ

ಬಹುದು. ಇಂತಹ ಅಂಧಃಕಾರದ ಸಮಯದಲ್ಲಿ ತಾವು ಸಂಚರಿಸುವುದನ್ನು ಯಾರಾದರೂ ನೋಡಿದರೆ—

**ಉತ್ತರಾ:** — ಸೌದಾಮಿನಿ, ಪ್ರೇಮವು ವಿವೇಕವನ್ನು ನೋಡುವುದಿಲ್ಲ. ಜಗತ್ತಿನ ಮಾನ ಮರ್ಯಾದೆಯನ್ನು ಲಕ್ಷಿಸುವುದಿಲ್ಲ. ಇನ್ನೂ ನಾನು ಎಲ್ಲಿಯ ವರೆಗೆ ಮಾರ್ಗನಿರೀಕ್ಷಣೆ ಮಾಡಲಿ? ಇಲ್ಲಿಯವರೆಗೆ ಮಾರ್ಗನಿರೀಕ್ಷಣೆ ಮಾಡುತ್ತ ಕುಳಿತು ವ್ಯರ್ಥವಾಗಿ ಕಾಲಹರಣ ಮಾಡಿದೆನು. ಇನ್ನುಮೇಲೆ ನಾನು ಮರಳಿ ಬರಲಾರೆನು. ಹೀಗೇ ರಣಾಂಗಣಕ್ಕೆ ಹೋಗಿ ಸ್ವಾಮಿಯನ್ನು ಶೋಧಿಸುವೆನು.

**ಸೌದಾ** :— ಅಂದರೆ, ಈಗ ತಾವು ರಣಾಂಗಣಕ್ಕೆ ಹೋಗತಕ್ಕವರೆ ?

**ಉತ್ತರಾ** :— ಹೌದು, ನಿನಗೇಕೆ ಆಶ್ಚರ್ಯವೆನಿಸಿತು ? ನಾನು ವೀರ ಕನ್ಯೆಯು, ವೀರಪತ್ನಿಯು, ಪತಿಪ್ರೇಮದ ದಿವ್ಯಪ್ರಕಾಶದಿಂದ ಮಾರ್ಗವನ್ನು ಹುಡುಕುತ್ತ ಈ ಉತ್ತರೆಯು--ರಣಾಂಗಣಕ್ಕೆ ಅಷ್ಟೇ ಏಕೆ ಪ್ರತ್ಯಕ್ಷ ಮೃತ್ಯುವಿನ ದರ್ಬಾರಕ್ಕೆ ಕೂಡ ಏನೂ ಭಯವಿಲ್ಲದೆ ಹೋಗಿ ಬರುವಳು. ಅಮ್ಮಯ್ಯಾ--ನಾನು ಇದನ್ನೇನು ನೋಡುವೆನು. (ಭಯದಿಂದ) ಯಾರು ? ನಾಥಾ ನಾಥಾ ! ಸೌದಾಮಿನೀ (ಭ್ರಮಿಷ್ಟತೆಯಿಂದ ಮಾಡುವಳು)

**ಸೌದಾ** :— (ಗಾಬರಿಯಾಗಿ) ದೇವಿಯವರೇ, ದೇವಿಯವರೇ, ಜಾಗ್ರತರಾಗಿರಿ.

**ಉತ್ತರಾ** :— ಸೌದಾಮಿನೀ, ಅದೋ ಅದೋ, ಅಲ್ಲಿ ನೋಡು ವಿಮಾನವನ್ನು. ಆ ದಿವ್ಯವಿಮಾನದಲ್ಲಿ ಕುಳಿತು, ಸ್ವಾಮಿಯವರು ಚಂದ್ರ, ಲೋಕಕ್ಕೆ ಹೋಗುತ್ತಿರುವರು. ಸೌದಾಮಿನೀ, ನೋಡಿದೆಯಾ--ಸ್ವಾಮಿಯವರು ಬ್ರಹ್ಮಾನಂದದಲ್ಲಿ ಮುಳುಗಿ ಹೋಗಿರುವರು. ನನ್ನ ಕಡೆಗೆ ನೋಡಿ ನಗುತ್ತಿರುವರು. ನಾಥಾ ! ನಾಥಾ !

**ಸೌದಾ** :— (ಸ್ವಗತ) ದೇವಿಯವರಿಗೆ ನಿಶ್ಚಯವಾಗಿ ಭ್ರಮೆಯುಂಟಾಗಿರುವುದು, ಏನು ಮಾಡಬೇಕು—ಅದೇ ತಿಳಿಯದಾಗಿದೆ.

**ಉತ್ತರಾ** :— ಸೌದಾಮಿನಿ, ಇಲ್ಲಿ ನನ್ನೊಬ್ಬಳನ್ನೇ ಬಿಟ್ಟು ಹೋಗುವುದಕ್ಕೆ ಪ್ರಾಣನಾಥರಿಗೆ ಹೇಗೆ ಮನಸ್ಸಾಯಿತೇ ? ಅವರಿಗೆ ನನ್ನ ವಿಷಯವಾಗಿ ಸ್ವಲ್ಪಾದರೂ ದಯೆ ಹುಟ್ಟಲಿಲ್ಲವೇ ? ಅಮಯ್ಯಾ—ಅದೋ ನೋಡು

ಸ್ವಾಮಿಯು ನನ್ನನ್ನೂ ಸಹ, ತಮ್ಮ ಕಡೆಗೇ ಕರೆಯುತ್ತಿರುವರು. ನಾಥಾ, ಇದೋ ಬಂದೆನು ! ಬಂದೆನು ! ತಾವು ಅಲ್ಲಿಯೇ ನಿಲ್ಲಿರಿ. ಇಷ್ಟೇಕೆ ಅವಸರ! ನನಗಾಗಿ ಸ್ವಲ್ಪ ತಡೆಯುವದಿಲ್ಲವೇ ?

ರಾಗ ಖಮಾಜ ಮಾಂಡ, ತಾಳ ದಾದರಾ

ಕರುಣಾ ಭರಣಾ । ಪ್ರಿಯ ಸಖೀ ದೀನ ನಾಥಾ ॥
ನೆರೆನೋಡು ದಯದಿ ॥ ಪಲ್ಲ ॥
ಪ್ರಾಣಸಖಾ ನಿನ್ನನು ನಾ ಅಗಲಿರಲಾರೆ ।
ಎನಗಾರು ಗತೀ ಬರುವೆನಿದೋ । ಸಮರ ವಿಹಾರ ।
ಭುವನೈಕ ಸುಂದರಾ ॥ ೧ ॥

ನಾಥಾ, ಹೀಗೇ ಬಿಡಾರಕ್ಕೆ ಹೋಗಿ, ಅರ್ಧವಾಗಿ ಹೆಣೆದಿಟ್ಟ ಪ್ರೇಮದ ಹಾರವನ್ನು ಹಾಗೆಯೇ ತೆಗೆದುಕೊಂಡು ಬರುತ್ತೇನೆ. ಸ್ವರ್ಗದ ನಂದನ ವನದಲ್ಲಿ, ನಾವಿಬ್ಬರೂ ಜೊತೆಯಾಗಿ ಆ ಪ್ರೇಮದ ಹಾರವನ್ನು ಪೂರ್ತಿ ಸೋಣ. ಛೆ, ಬೇಡ. ಆಕಾಶದಲ್ಲಿಯ ತೇಜಃಪುಂಜವಾದ ತಾರಾಕುಸುಮ ಗಳ ಮೋಹಮಾಲೆಯನ್ನೇ ನಾನು–ತಮ್ಮ ಕೊರಳಲ್ಲಿ ಹಾಕುತ್ತೇನೆ. ಇದೋ, ಬಂದೆನು, ಬಂದೆನು.

(ಹೋಗತೊಡಗುವಳು)

**ಸೌದಾ** :— (ತಡೆದು) ದೇವಿಯವರೇ, ಭ್ರಮಿಷ್ಠರಂತೆ ಹೀಗೇಕೆ ಮಾಡುವಿರಿ ?

**ಉತ್ತರಾ** :— ಬಿಡು, ಬಿಡು ನನಗೆ ಮಾತಾಡುವುದಕ್ಕೆ ಸಮಯ ವಿಲ್ಲ. ನೀನು ನಿನ್ನ ದಾರಿ ಹಿಡಿದು ಹೊರಟು ಹೋಗು.

(ಕೈ ಕೊಸರಿಕೊಂಡು ಹೋಗುತ್ತಾಳೆ)

**ಸೌದಾ** :— ಅಮ್ಮಯ್ಯಾ, ಇವರಂತೂ ಹೊರಟುಹೋದರು. ನಾನೂ ಇವರ ಬೆನ್ನು ಹತ್ತಲೋ, ಅಥವಾ ಯಾರನ್ನಾದರೂ ಕರೆಯಲೋ? (ವಿಚಾರಿಸಿ) ವೇಷಾಂತರಿಸಿಕೊಂಡು ಇವರ ಬೆನ್ನುಹತ್ತಿಯೇ ಹೋಗುವೆನು, ಮೊದಲು ಈ ಸಮಾಚಾರವನ್ನು ಸುಭದ್ರಾದೇವಿಯವರಿಗೆ ತಿಳಿಸೋಣ. (ಹೋಗುವಳು.)

———

# ಎರಡನೆಯ ಪ್ರಸಂಗ

(ಸ್ಥಳ ಪಾಂಡವರ ಬಿಡಾರ, ಪಾತ್ರಗಳು :— ಯುಧಿಷ್ಠರ, ಭೀಮ ಮೊದಲಾದ ವರು ಖಿನ್ನ ಮುದ್ರೆಯಿಂದ ಕುಳಿತಿರುವರು.)

**ಯುಧಿಷ್ಠರ** :— (ದುಃಖದಿಂದ) ಹಾಯ್, ಹಾಯ್ ಈ ದಿವಸ ಕುಮಾರ ಅಭಿಮನ್ಯುವು ಭಾರತೀರ್ಥದಲ್ಲಿ ದೇಹವನ್ನು ಬಿಟ್ಟನೆಂದು ಹೇಳುವು ದಕ್ಕಿಂತಲೂ, ಈ ಪಾಂಡವರ ಶೌರ್ಯ ಶಕ್ತಿಯೇ ಮಣ್ಣು ಪಾಲಾಯಿತೆಂದು ಹೇಳಬಹುದು. ಮತ್ತು ಈ ಯುಧಿಷ್ಠಿರನ ಪುಣ್ಯಬಲವು ಸಂಪೂರ್ಣವಾಗಿ ಅಳಿದುಹೋಯಿತು ಧೈರ್ಯವೂ ಉತ್ಸಾಹವೂ ಅಗ್ನಿಗೆ ಆಹುತಿಯಾದವು.

**ಭೀಮ** :— ಅಸದಳವಾದ ಶೌರ್ಯದಿಂದ ಶತ್ರು ಸಮೂಹವನ್ನು ನುಗ್ಗುಮಾಡಿ, ಆ ಬಾಲಪುತ್ರನು, ಅಕಾಲದಲ್ಲಿ ಭೂಮಿಗೆ ಪತನವಾದನು. ವೀರಮರಣದ ಮಂಗಲಲೇಪವನ್ನು ಲೇಪಿಸಿಕೊಂಡು, ಆ ವೀರ ಕುಮಾರನು, ಒಳ್ಳೇ ·ಹಕ್ಕಿನಿಂದ ಸ್ವರ್ಗದ ಸಿಂಹಾಸನವನ್ನೇರಿದನು. ಈ ಭೀಮನ ಬ್ರಹ್ಮಾಂಡ ಶಕ್ತಿಗೆ—ಈ ದಿವಸ ಅಪಜಯದ ಕುಂದು ಹತ್ತಿತು. ಧಿಕ್ಕಾರ ! ಧಿಕ್ಕಾರವಿರಲಿ ! ! ಈ ಭೀಮನ ಪೊಳ್ಳುಗದೆಯ ಅಹಂಕಾರಕ್ಕೆ ! ಆ ಸಿಂಹಾ ರ್ಭಕನು ಚಕ್ರವ್ಯೂಹವನ್ನು ಭೇದಿಸಿದನು— (ಶ್ರೀ ಕೃಷ್ಣ ಅರ್ಜುನರು ಬರುವರು)

**ಅರ್ಜುನ** :— (ಅನಂದದ ಆತುರತೆಯಿಂದ) ಏನು ಚಕ್ರವ್ಯೂಹವನ್ನು ಭೇಧಿಸಿದನೇ ? ಯಾರು-ಶೂರನಾದ ಮುದ್ದು ಅಭಿಮನ್ಯುವೇ ?

**ಯುಧಿ** :— ಹೌದು-ಅದೇ ಸಿಂಹಾರ್ಭಕನು ಚಕ್ರವ್ಯೂಹವನ್ನು ಭೇದಿಸಿದನು. ಆದರ.. ........

**ಶ್ರೀಕೃಷ್ಣ** :— (ಆತುರತೆಯಿಂದ) ಆದರೆ—ಆದರೆ--ಆ ವೀರ ಕುಮಾ ರನು ಎಲ್ಲಿರುವನು ?

**ಭೀಮ** :— (ಉಸುರ್ಗರೆದು) ಚಕ್ರವ್ಯೂಹವನ್ನು ಭೇದಿಸಿದನು; ಅದರೆ ಕೊನೆಗೆ ರಣಾಂಗಣದಲ್ಲಿ ಬಿದ್ದನು !

**ಅರ್ಜುನ** :— (ದುಃಖದಿಂದ) ಹಾಯ್ ದುರ್ದೈವವೇ ! ಶಿರಸ್ಸಿನ ಮೇಲೆ ವಜ್ರಾಘಾತವಾಯಿತು. ಭೀಮಾ, ನೀನಿದನ್ನು ಏನು ಹೇಳುವೆ ?

**ಭೀಮ** :— ಅರ್ಜುನಾ, ಏನು ಹೇಳಲಿ ! ದುಷ್ಟಪ್ರಾರಬ್ಧವು, ಹೇಳ ಬಾರದಂತಹ ಮಾತನ್ನು ಹೇಳುವ ಪ್ರಸಂಗ ತಂದಿತು.

**ಅರ್ಜುನ** :— (ಹತಾಶನಾಗಿ) ಉಶ್ ! ಇಂತಹ ದುರ್ವಾರ್ತೆಯನ್ನು ಕೇಳುವಂತಹ ಕರ್ಣಗಳು ಬಧಿರವಾಗಿದ್ದರೆ ಲೇಸಾಗುತ್ತಿತ್ತು. ದೇವಾ ! ಕಾಲಕೇತುವು ಆ ಬಾಲಸೂರ್ಯನನ್ನು ಎಂದೂ ದೃಷ್ಟಿಗೋಚರವಾಗದಂತೆ ನುಂಗಿದನು ! ಈ ಪಾಂಡವರು ತಮ್ಮ ಸ್ವಹಸ್ತದಿಂದಲೇ ತಮ್ಮ ಪರಾಕ್ರಮಕ್ಕೆ ಕಪ್ಪು ಹತ್ತಿಸಿಕೊಂಡರು.

**ಶ್ರೀಕೃಷ್ಣ** :— (ಸ್ಮರಣೆಯ ಸ್ವರದಲ್ಲಿ) ಪಾರ್ಥಾ, ಸೈರಿಸು, ಸೈರಿಸು, ಪುತ್ರಶೋಕವನ್ನು ಸೈರಿಸು, ಅಖಂಡವಾಗಿ ತಿರುಗುವಂತಹ ದೈವಚಕ್ರದ ತಿರುಗಣೆಯಲ್ಲಿ ಯಾವನು ತಾನೇ-ಬಿಡುಗಡೆ ಹೊಂದಿರುವನು ?

**ಅರ್ಜುನ** :— ನನ್ನ ಕುಮಾರ-ಕುಲದೀಪಕನು ಮೃತನಾಗಲಿಲ್ಲ— ಆದರೆ ಈ ಅರ್ಜುನನ ಜೀವನ ಸರ್ವಸ್ವದ ಆಶೆಯ ನಂದಾದೀಪವು, ಕಾಲನ ಬಿರುಗಾಳಿಯಿಂದ ಶಾಂತವಾಯಿತು ! ಹೇಳು ಅಣ್ಣಾ ಧರ್ಮರಾಜಾ ಹೇಳು, ನನ್ನ ವೀರ ಕುಮಾರನನ್ನು ಸಮರಭೂಮಿಗೆ ಕಳುಹಿಸಿದವರಾರು ? ಮತ್ತು ಅವನನ್ನು ಮೃತ್ಯುವಿನ ಮುಖಕ್ಕೆ ಗುರಿಮಾಡಿದವರಾರು ?

**ಯುಧಿ** :— ನಾನೇ ಚಾಂಡಾಲನಾದ ನಾನೇ ಅವನಿಗೇ, ಹೋಗುವುದಕ್ಕೆ ಆಜ್ಞೆಯನ್ನಿತ್ತೆನು. ವಿನಾಶಕಾಲಕ್ಕೆ ವಿಪರೀತಬುದ್ಧಿಯು ಸೂಚಿಸಿತು; ಅಲ್ಲದೆ ಮತ್ತೇನು ?

**ಅರ್ಜುನ** :— ಆದರೆ ಭೀಮಾ, ಸಮರಭೂಮಿಯಲ್ಲಿ ವೀರಕುಮಾರನ ರಕ್ಷಣೆ ಮಾಡುವುದಕ್ಕೆ—

**ಭೀಮ** :— ಈ ಭೀಮನು ಜೀವನದ ಹಂಗುದೊರೆದು, ಆತನ ಬೆನ್ನು ಬಿಡದೆ ಧಾವಿಸುತ್ತ ನಡೆದಿದ್ದನು.

**ಅರ್ಜುನ** :— ನಿನ್ನಂತಹ ಕಾಲಾಂತಕನು ನನ್ನ ಮಗುವಿನ ಸಂರಕ್ಷಣೆ ಮಾಡುತ್ತಿರಲು, ನನ್ನ ಅಭಿಮನ್ಯುವಿನ ಮೇಲೆ ಕಣ್ಣು ತಪ್ಪಿಸಿ ಹೊಂಚುಹಾಕಿ ತನ್ನ ಕಾರ್ಯವನ್ನು ಸಾಧಿಸಿಕೊಳ್ಳುವುದಕ್ಕೆ ಆ ಮೃತ್ಯುವಿಗೆ ಹೇಗೆ ಧೈರ್ಯವಾಯಿತು ? ಈ ಭೀಮನ ಗದೆಯು ಒಳ್ಳೇ ಸಮಯಕ್ಕೆ ಕೈಕೊಟ್ಟಿತು—

**ಭೀಮ** :— ಇಲ್ಲ ಇಲ್ಲ. ವಜ್ರ ಪ್ರಹಾರದಿಂದ ಭೂಮಂಡಲವನ್ನೇ ಭೇದಿಸುವಂತಹ ಈ ಭೀಮನ ಪರಾಕ್ರಮಶಾಲಿ ಗದೆಯು ಅಖಂಡವಾಗಿ

ವಿಜಯವನ್ನು ಸಂಪಾದಿಸಿತು, ಆದರೆ ಜಯದ್ರಥನು ವಿಶ್ವಾಸಘಾತ ಮಾಡಿದನು; ಮತ್ತು ದುರ್ದೈವವು ಸಮಯವನ್ನು ಸಾಧಿಸಿತು.

**ಶ್ರೀಕೃಷ್ಣ** :— ಏನು ಜಯದ್ರಥನು ವಿಶ್ವಾಸಘಾತ ಮಾಡಿದನೇ ?

**ಭೀಮ** :— ಅಹುದು. ಚಕ್ರವ್ಯೂಹದ ಬಾಯಿಗೆ ಆ ಕುಲಕಂಟನೇ ಅಡಗಿಕೊಂಡು ಕುಳಿತಿದ್ದನು. ಪ್ರಥಮದಲ್ಲಿ ಆಚಾರ್ಯರು ಸಹಿತ ಜಯದ್ರಥನೇ ಮೊದಲಾದ ಅಸಂಖ್ಯವೀರರನ್ನು ಮಣ್ಣು ಗೂಡಿಸುತ್ತ ವೀರ ಅಭಿಮನ್ಯುವು ಚಕ್ರವ್ಯೂಹವನ್ನು ಭೇದಿಸುತ್ತ ನಡೆದಿದ್ದನು. ಆ ಸಮಯದಲ್ಲಿ ಜಯದ್ರಥನು ಮೋಸಮಾಡಿ, ನಮಗೂ, ಮತ್ತು ಅಭಿಮನ್ಯುವಿಗೂ ತಪ್ಪು ಗಂಟು ಮಾಡಿ, ಇತ್ತ ಕಡೆಗೆ ನಮ್ಮನ್ನು ಯುದ್ಧದಲ್ಲಿ ತೊಡಗಿಸಿದನು. ಅತ್ತ ಅಭಿಮನ್ಯುವು ತೀಕ್ಷ್ಣವಾದ ಬಾಣದಂತೆ ಚಕ್ರವ್ಯೂಹದಲ್ಲಿ ಹೊಕ್ಕನು. ನಮಗೂ ಅವನಿಗೂ ಮಹದಂತರವಾಯಿತು.

**ಅರ್ಜುನ** :— ಎಲಾ ನೀಚಾ, ಜಯದ್ರಥಾ, ಇಂತಹ ವಿಶ್ವಾಸಘಾತದಿಂದ ನಿನ್ನ ದುಷ್ಟತನಕ್ಕೆ ನನ್ನ ಕುಮಾರನನ್ನು ಬಲಿ ತೆಗೆದುಕೊಂಡೆಯಾ ? ಆದರೆ ಭೀಮಾ, ಜಯದ್ರಥನಂತಹ ಒಂದು ಕ್ಷುದ್ರಮರ್ಕಟವು ನಿನ್ನ ಮಾರ್ಗವನ್ನು ತಡೆದು ನಿನ್ನನ್ನು ಅಡ್ಡಗಟ್ಟಿತೇ ?

**ಶ್ರೀಕೃಷ್ಣ** :— ಅರ್ಜುನಾ, ಜಯದ್ರಥನ ಪರಾಕ್ರಮಕ್ಕೆ ಭಗವಾನ್ ಶಂಕರನ ವರಪ್ರದಾನದ ಬೆಂಬಲವಿರುವದಲ್ಲವೆ ? ಆ ವರದಾನದ ದೈವೀ ಶಕ್ತಿಯ ಮುಂದೆ, ಈ ಭೀಮನ ಪರಾಕ್ರಮವು—ಕುಗ್ಗಿ ಹೋಯಿತು. ಇದರಲ್ಲಿ ಆಶ್ಚರ್ಯವೇನು ?

**ಅರ್ಜುನ** .— (ಕ್ರೋಧದಿಂದ) ಆ ನೀಚ ರಾಕ್ಷಸನಿಗೆ ಭಗವಾನ್ ಶಂಕರನ ವರದಾನವೇ ? ಇರಲಿ. ಆ ವರದಾನದ ದೈವಿಶಕ್ತಿಯನ್ನು ಈ ದಿವಸ ಈ ಪಾರ್ಥನು ಮಣ್ಣುಗೂಡಿಸುವನು. ನೋಡು ' ನೋಡು ! ನನ್ನ ಕುಮಾರ ಅಭಿಮನ್ಯುವಿನ ರಕ್ತವು ಭೂಮಿಯಲ್ಲಿ ಇಂಗುವ ಪೂರ್ವದಲ್ಲಿಯೇ ಆ ದುಷ್ಟನ ರಕ್ತವನ್ನು ಅದರ ಮೇಲೆ ಸಿಂಪಡಿಸುವೆನು. ವಾತಾವರಣದಲ್ಲಿ ಹಾರಾಡುವಂತಹ ಅಣುರೇಣುಗಳಿರಾ, ಈ ಧನುರ್ಧಾರಿ ಪಾರ್ಥನ ಪವಿತ್ರ ಪ್ರತಿಕಾರದ ಸಂದೇಶವನ್ನು ಆ ಜಯದ್ರಥನಿಗೆ ತಿಳುಹಿಸಿರಿ.

**ಯುಧಿ** :— ಅರ್ಜುನಾ, ಶಾಂತನಾಗು, ಶಾಂತನಾಗು.

**ಅರ್ಜುನ** :— ಛೀ, ಇನ್ನೆಲ್ಲಿಯ ಶಾಂತತೆಯು ! ವೀರ ಕುಲಕ್ಕೆ ಕಲಂಕ ಹಚ್ಚುವಂತಹ ಆ ಉನ್ಮತ್ತ ನರಾಧಮನು, ವಿಶ್ವಾಸಘಾತದಿಂದ ಕುಮಾರನ ಕೊಲೆಯನ್ನು ಮಾಡಿದ ವಾರ್ತೆಯನ್ನು ಕೇಳಿ, ತಂದೆಯಾಗ ನಾನು, ಹಣೆಯಮೇಲೆ ಕೈಯಿಟ್ಟುಕೊಂಡು ಶೋಕ ಮಾಡುತ್ತಾ ಸುಮ್ಮನೇ ಕೂಡಬೇಕೆ ?

**ಶ್ರೀಕೃಷ್ಣ** :— ಹಾಗಾದರೆ ಈಗ ನೀನು, ಏನು ಮಾಡತಕ್ಕವನು ?

**ಅರ್ಜುನ** : — (ಶೋಕ ಸಂತಪ್ತನಾಗಿ) ಅಭಿಮನ್ಯುವಿನ ಪವಿತ್ರಆತ್ಮಕ್ಕೆ ಶಾಂತಿ ಉಂಟಾಗುವಂತೆ ಒಂದು ಘೋರ ಪ್ರತಿಜ್ಞೆಯನ್ನು ಮಾಡುವೆನು. ಶ್ರೀಕೃಷ್ಣಾ, ನಿಮ್ಮ ಪವಿತ್ರ ಚರಣಗಳ ಸಾಕ್ಷಿಯಾಗಿ, ಕುಲಪೂರ್ವಜರ ಪುಣ್ಯ ವನ್ನು ಸ್ಮರಿಸಿ, ನಾನು ಸತ್ಯಪ್ರತಿಜ್ಞೆ ಮಾಡುವುದೇನೆಂದರೆ :— ನಾಳೆ ಸೂರ್ಯನು ಅಸ್ತಾಚಲಕ್ಕೆ ಹೋಗುವ ಪೂರ್ವದಲ್ಲಿಯೇ ಆ ಉನ್ಮತ್ತ ಜಯದ್ರಥನ ರುಂಡವನ್ನು ಕತ್ತರಿಸಿ ಚೆಂಡಾಡುವೆನು ಇಲ್ಲವಾದರೆ—

**ಶ್ರೀಕೃಷ್ಣ** :— ಹಾ. ಹಾ ಅರ್ಜುನಾ ಸ್ವಲ್ಪ ತಾಳು, ಜಯದ್ರಥನ ಸಂಹಾರಕ್ಕೆ ಏನಾದರೊಂದು ವಿಪರೀತ ಪ್ರತಿಜ್ಞೆಯನ್ನು ಮಾಡಬೇಡ.ಏಕೆಂದರೆ ಅವನಿಗೆ ಭಗವಾನ್ ಶಂಕರನ ವರದಾನವಿರುವದು. ನನ್ನ ಮಾತುಕೇಳು.

**ಅರ್ಜುನ** :— ಇಲ್ಲ, ಇಲ್ಲ. ಇನ್ನುಮೇಲೆ ಈ ಪಾರ್ಥನು ನಿಮ್ಮ ಶಬ್ದಗಳನ್ನು ಮನ್ನಿಸುವುದಿಲ್ಲ; ಶಂಕರನ ವರದಾನವನ್ನೂ ಲಕ್ಷಿಸುವುದಿಲ್ಲ. ಈ ಗಾಂಡೀವ ಧನುರ್ಧಾರೀ ಪಾರ್ಥನು,ಜಯದ್ರಥನ ಸಂಹಾರ ಮಾಡದೆ ಹಾಗೇ ಭೂಮಿಯ ಮೇಲೆ ಜೀವಿಸಲಾರನು. ಸಂಹಾರವು ಮತ್ತೆ ಅದು—ನಾಳೆ ಸೂರ್ಯಾಸ್ತವಾಗುವದರೊಳಗಾಗಿಯೇ—ಇದೇ ನನ್ನ ಸತ್ಯಪ್ರತಿಜ್ಞೆಯು ! ಈ ಪ್ರತಿಜ್ಞೆಗೆ ಶ್ರೀಕೃಷ್ಣಾ; ನಿಮ್ಮ ಮತ್ತು ಧರ್ಮರಾಜನ ಪುಣ್ಯ ಚರಣಗಳೇ ಸಾಕ್ಷಿ. ಈ ಪ್ರತಿಜ್ಞೆಯನ್ನು ನಾನು ಪೂರ್ಣಮಾಡದಿದ್ದರೆ, ಈ ದೇಹವನ್ನು ಅಗ್ನಿ ನಾರಾಯಣನಿಗೆ ಸಮರ್ಪಿಸುವೆನು.

**ಶ್ರೀಕೃಷ್ಣ** :— ಅರ್ಜುನಾ, ಸಂತಾಪದ ಭರದಲ್ಲಿ ಪ್ರತಿಜ್ಞೆಯನ್ನು ಮಾಡಿದೆ; ಆದರೆ ಹುಚ್ಚಾ, ಆ ಪ್ರತಿಜ್ಞೆಗೆ—ಅಗ್ನಿಕಾಷ್ಟ ಭಕ್ಷಣದ ಈ ಶುಷ್ಕ ಕಾಷ್ಟವನ್ನೇಕೆ ಬೆನ್ನಿಗೆ ಹಚ್ಚಿಕೊಂಡೆ ?

**ಅರ್ಜುನ** :— ಏಕೆ ? ಇನ್ನೂ ಪಾಂಡವರ ಪುಣ್ಯಕ್ಕೇನು ಬಡತನ ಬಂದಿಲ್ಲ.

**ಭೀಮ** :— ಈ ಭೀಮನ ಪರಾಕ್ರಮಶಾಲಿಯಾದ ಗದೆಯು ಇನ್ನೂ ಸನ್ಯಾಸವನ್ನು ಸ್ವೀಕರಿಸಿಲ್ಲ.

**ಅರ್ಜುನ** :— ಅರ್ಜುನನ ಈ ಗಾಂಡೀವ ಧನುಷ್ಯವು ಮುರಿದು ಹೋಗಿಲ್ಲ.

**ಶ್ರೀಕೃಷ್ಣ** :— ಅಲ್ಲದೆ ನಮ್ಮ ಸುದರ್ಶನ ಚಕ್ರವಂತೂ ಕೊನೆಗೆ ನಿಮ್ಮ ಸಹಾಯಕ್ಕೋಸುಗ ಸಿದ್ಧವಾಗಿಯೇ ಇವೆ

**ಅರ್ಜುನ** :— ಪಾಂಡವರ ರಕ್ಷಣಕ್ಕೋಸುಗ ಶ್ರೀಕೃಷ್ಣನು ಮತ್ತು ಆತನ ಸುದರ್ಶನ ಚಕ್ರದ ಸಹಾಯವಂತೂ ನಮಗೆ ಇದ್ದೇ ಇರುವುದು; ಆದರೆ ಈ ಪಾರ್ಥನ ಕೈಯಲ್ಲಿಯ ಈ ಪರಾಕ್ರಮಿಯಾದ ಗಾಂಡೀವ ಧನುಷ್ಯವು—ಈ ಪ್ರತಿಜ್ಞೆಯನ್ನು ಪೂರ್ಣಗೊಳಿಸಲಿಕ್ಕೆ ಸಾಕಾಗಿದೆ. (ಗಾಂಡೀವ ಧನುಷ್ಯದ ರಣತ್ಕಾರ ಮಾಡುತ್ತಾನೆ) ಬರೀ ಠಣತ್ಕಾರದ ಗಂಭೀರ ಗರ್ಜನೆಯಿಂದಲೇ ಬ್ರಹ್ಮಾಂಡವನ್ನು ಭಯಪಡಿಸುವಂತಹ ಸಾಮರ್ಥ್ಯವು, ಈ ಧನಂಜಯನ ಧನುಷ್ಯದಲ್ಲಿ ಇಲ್ಲವೇನು ? ( ತೆರೆಯಲ್ಲಿ-ಇಲ್ಲ ಇಲ್ಲ, ಖಂಡಿತವಾಗಿಯೂ ಇಲ್ಲ.) ಯಾರು ? ಸುಭದ್ರಾ ! ಪುತ್ರಶೋಕದ ಪ್ರತ್ಯಕ್ಷಪ್ರತಿಮೆಯೇ ಬಂದಳು.

**ಶ್ರೀಕೃಷ್ಣ** :— **(ಸ್ವ)** ಸರಿ. ಇನ್ನುಮೇಲೆ ಶೋಕದ ಪರಮಾವಧಿಯು ಶಿಖರಕ್ಕೇ ಮುಟ್ಟುವುದು.

**ಯುಧಿ** :— ದೇವಾ ಸುಭದ್ರಾದೇವಿಗೆ ಈ ಕಪ್ಪಾದ ಮುಖವನ್ನು ಹೇಗೇ ತೋರಿಸಲಿ ?

**ಶ್ರೀಕೃಷ್ಣ** :— ಧರ್ಮರಾಜ, ನೀನು ವಿವೇಕಶಾಲಿಯು; ಶಾಂತಶೀಲನು, ನೀನೇ ಹೀಗೆ ಶೋಕಮಾಡುತ್ತಾ ಕುಳಿತರೆ ಸುಭದ್ರೆಯನ್ನು ಸಮಾಧಾನ ಮಾಡತಕ್ಕವರಾರು ?

**ಸುಭದ್ರಾ** :— (ಶೋಕ ಸಂತಾಪದಿಂದ) ಇಲ್ಲ, ಇಲ್ಲ, ಖಂಡಿತವಾಗಿಯೂ ಇಲ್ಲ. ನಿಮ್ಮ ಪರಾಕ್ರಮದ ಪೊಳ್ಳು ಅಹಂಕಾರವು ಜಗತ್ತಿಗೆಲ್ಲ ತಿಳಿದುಹೋಯಿತು. ನಿಮ್ಮ ಧನುಷ್ಯದಲ್ಲಿ ಸಾಮರ್ಥ್ಯವಿದ್ದಿದ್ದರೆ, ನನ್ನ ಮುದ್ದು ಕುಮಾರನು ಮೃತ್ಯು ಮುಖಕ್ಕೆ ಗುರಿಯಾಗುತ್ತಿದ್ದನೆ ! ನನ್ನ ಅಭಿಮನ್ಯುವು ರಣಾಂಗಣದಲ್ಲಿ ಬಿದ್ದನು. ನನ್ನ ಜೆಲೆಯುಳ್ಳ ಮಾಣಿಕ್ಯವನ್ನು

ಕಾಲನು ಗ್ರಾಸಿಸಿದನು ಭೀಮ ಭಾವನವರೆ ತಾವು ನನ್ನ ಬಾಲಕನ ಸಂರಕ್ಷಣಗೋಸುಗ ಆತನ ಬೆನ್ನು ಹತ್ತಿ ಹೋದವರಲ್ಲವೆ ?–ಹಾಗಾದರೆ, ಹೇಳಿರಿ ಹೇಳಿರಿ, ನನ್ನ ಕುಮಾರ ಕಂಠೀರವನು ಎಲ್ಲಿರುವನು ? ಅವನನ್ನು ಕರೆದುಕೊಂಡು ಹೋಗಿ ಒಬ್ಬನನ್ನೇ ಎಲ್ಲಿ ಬಿಟ್ಟು ಬಂದಿರಿ ? ಏಕೆ—ಮಾತನಾಡುವುದಿಲ್ಲ ? ನೀವೇ ನನ್ನ ಮುದ್ದುಕುಮಾರನ ಮರಣಕ್ಕೆ ಕಾರಣೀಭೂತರಾದಿರಿ ! ತಾಯಿ ಮಕ್ಕಳನ್ನು ಅಗಲಿಸಿದಿರಿ. ಏಕೆ ? ಈಗೇಕೆ ಮಾತಾಡುವುದಿಲ್ಲ ? ನನ್ನ ಕುಮಾರನನ್ನು ನನಗೆ ಬೇಗನೆ ತಂದು ತೋರಿಸಿರಿ. ಇಲ್ಲವಾದರೆ, ನಾನು ಇಲ್ಲಿಯೇ ನನ್ನ ತಲೆಯನ್ನು ಅಪ್ಪಳಿಸಿ—ಪ್ರಾಣವನ್ನು ಬಿಡುವೆನು.

**ಶ್ರೀಕೃಷ್ಣ** :— ತಂಗೀ ಸುಭದ್ರೆ, ಶೋಕವನ್ನು ಸೈರಿಸು. ವಿವೇಕದಿಂದ ವಿಚಾರಮಾಡು; ಸಂತಾಪದಿಂದ ನಿನಗೆ ಹುಚ್ಚುಹಿಡಿಯಿತೋ ಹೇಗೆ ? ಸಂಸಾರದಲ್ಲಿರತಕ್ಕ ಪ್ರಾಣಿಗಳಿಗೆ ಇಂತಹ ಪ್ರಸಂಗವು ಸಂಭವಿಸುವುದು ಸ್ವಾಭಾವಿಕವೆ ! ಕ್ಷತ್ರಿಯ ಕನ್ನೆಯೂ ವೀರಮಾತೆಯೂ ಶ್ರೀಕೃಷ್ಣನ ಭಗಿನಿಯೂ ಆದ ನೀನು, ಹೀಗೆ ಶೋಕಮಾಡುವುದು ಭೂಷಣವಲ್ಲ.

ರಾಗ ಖಮಾಚ, ತಾಳ ತ್ರಿವಟ

ಸೈರಿಸು ಪ್ರಲಾಪವಾ । ಸುನೀತೆ ॥ ಪಲ್ಲ ॥
ವೀರಾಂಗನೆ ತವ । ಪುತ್ರಶೋಕ ಸಾಕು ನಿಲಿಸು ॥
ತರವೆ ನಿನಗೆ ಸುಗುಣಮಣಿಯೇ ॥ ಅನುಪಲ್ಲ ॥
ವೀರಮಾತೆಯೇ ॥ ಬಿಡು ನೀ ಮೋಹಾ ॥
ವೀರರ ಮರಣಕೆ ಶೋಕ ಮಾಡುವರೆ ॥ ೧ ॥

**ಸುಭದ್ರಾ** :— ಕೃಷ್ಣಾ ! ಶೋಕವನ್ನು ಹೇಗೆ ತಡೆಯಲಿ ? ಈ ಸುಭದ್ರೆಯ ತಲೆಯ ಮೇಲೆ ಬ್ರಹ್ಮಾಂಡದ ಗೋಲವೆ ಉರುಳಿ ಬಿತ್ತು. ಅವಳ ಆಶೆಯ ಆಧಾರಸ್ತಂಭವು ಕಳಚಿಬಿತ್ತು. ಅಭಿಮನ್ಯುವೇ ! ಅಭಿಮನ್ಯುವೇ ! (ಮೂರ್ಛಿತಳಾಗುವಳು.)

**ಶ್ರೀಕೃಷ್ಣ** :— ತಂಗಿ ಸುಭದ್ರೆ, ಜಾಗ್ರತೆಯಾಗು !

**ಯುಧಿ** :— ಮಾಯಾಳುವಾದ ಮಾತೆಯ ಪುತ್ರಶೋಕದ ಆಘಾತದಿಂದ ಪಾಷಾಣವು ಸಹ ಕರಗಿ ನೀರಾಗುವದು. ಸುಭದ್ರಾದೇವಿ, ನಿನ್ನ ಪುತ್ರಶೋಕಕ್ಕೆ ನಾನೇ ಕಾರಣೀಭೂತನಾದೆನು; ನನ್ನ ಅಪರಾಧವನು ಕ್ಷಮಿಸು !

**ಸುಭದ್ರಾ** :— ನೀವೇ ಈ ಪ್ರಸಂಗದಲ್ಲಿ ನನ್ನನ್ನು ಕ್ಷಮಿಸಿರಿ. ಪುತ್ರ ಶೋಕದ ಸಂತಾಪದಲ್ಲಿ ವಿಚಾರಶೂನ್ಯಳಾಗಿ ನಾನು ನಿಮಗೆ ಕೆಟ್ಟ ಮಾತು ಗಳನ್ನಾಡಿ ತಮ್ಮ ಮನಸ್ಸನ್ನು ನೋಯಿಸಿದೆನು. ಕೃಷ್ಣಾ, ಪುತ್ರಶೋಕವನ್ನು ಹೇಗೆ ಸೈರಿಸಲಿ ! ಅಭಿಮನ್ಯುವಿನ ಮರಣದಿಂದ ನನಗೆ ದಶದಿಕ್ಕುಗಳು ಶೂನ್ಯ ವಾಗಿರುವವು.

**ಶ್ರೀಕೃಷ್ಣ** :— ಭಗಿನೀ, ಕುಮಾರ ಅಭಿಮನ್ಯುವು ನಮ್ಮನ್ನು ತೊಲಗಿ ಹೋದನು, ಆದರೆ ಅವನು ಯಾರಿಗೂ ದೊರೆಯದಂತಹ ಯಶಸ್ಸನ್ನು ಸಂಪಾದಿಸಿ ಸ್ವರ್ಗ ಸೋಪಾನವನ್ನೇರಿದನು. ಮರಣವನ್ನು ಕಾಲಿನಿಂದ ಒದ್ದು, ಅವನು ಚಿರಂಜೀವಿಯಾದನು. ನಿನಗೆ ವೀರ ಮಾತೆಯ ಪುಣ್ಯಪದವಿಯನ್ನು ಸಂಪಾದಿಸಿಕೊಟ್ಟು ಆ ಕುಲದೀಪಕನು ಅಜರಾಮರನಾದನು. ಸುಭದ್ರೆ, ನೀನು ಧನ್ಯಳು, ಧನ್ಯಳು. ಇಂತಹ ವೀರ ಕುಮಾರನ ಮಾತೆ ಯಾಗುವ ಭಾಗ್ಯವು ಲಭಿಸಿತು; ನಿನ್ನ ಜನ್ಮವು ಸಾರ್ಥಕವಾಯಿತು; ಆದರೆ ಹುಚ್ಚೀ, ನೀನೆ ಹೀಗೆ ಶೋಕಮಾಡುತ್ತಾ ಕುಳಿತರೆ–ಪಾಪ ಆ ಉತ್ತರೆಯ ಸಮಾಧಾನ ಮಾಡತಕ್ಕವರಾರು ? ಅವಳಿಗೆ ಧೈರ್ಯ ಹೇಳತಕ್ಕವರಾರು ? ಆ ದೀನ ಬಾಲೆಯ ಶಿರಸ್ಸಿನ ಮೇಲೆ ಅಕಾಲದಲ್ಲಿಯೇ ವೈಧವ್ಯದ ವಜ್ರಾ ಘಾತವು ತಗಲಿತು. ಈ ಘೋರ ವಾರ್ತೆಯನ್ನು ಕೇಳಿ ಅವಳ ಮನಸ್ಸಿನ ಸ್ಥಿತಿಯು ಏನಾಗುವುದೆಂಬುದರ ಕಲ್ಪನೆಯಾದರೂ ನಿನಗಿರುವದೆ ?

**ಸುಭದ್ರಾ** :— ಅವಳ ದಾರುಣವಾದ ಆಕ್ರೋಶದಿಂದ ಬ್ರಹ್ಮಾಂಡದ ಕಿವಿಗಳು ಕೂಡಾ ಮಂದವಾಗಿ ಹೋಗುದವು.

**ಶ್ರೀಕೃಷ್ಣ** :— ಅಂದಮೇಲೆ--ಅವಳ ಸಮಾಧಾನವನ್ನು ಮೊದಲು ಮಾಡಬೇಕಲ್ಲವೆ ? ಇಲ್ಲವಾದರೆ ಭಯಂಕರ ಅನರ್ಥವು !

**ಸೌದಾಮಿನಿ** :— (ಪ್ರವೇಶಿಸಿ) ದೇವಿಯವರೇ, ಅನರ್ಥವು--- ಅನರ್ಥವು ! ಭಯಂಕರವಾದ ಅನರ್ಥವು !

**ಸುಭದ್ರಾ** :— ಏನೇ ? ಏನಾಯಿತು ? ಉತ್ತರೆಯು ಎಲ್ಲಿರುವಳು ?

**ಸೌದಾ** :— ಅವರು ಆಗಲೇ ಬಿಡಾರದಿಂದ ಹೊರಗೆ ಹೋದರು ? ಆದರೆ ತಾವೇ ಅತ್ತ ಕಡೆಗೆ ನಡೆಯಿರಿ— ಎಲ್ಲವನ್ನು ಹೇಳುತ್ತೇನೆ.

**ಶ್ರೀಕೃಷ್ಣ** :— ಸುಭದ್ರೆ, ಹೋಗು ಹೋಗು. ಕಠಿಣ ಪ್ರಸಂಗವು ಬರಬಾರದಿತ್ತು. ಬಂದನಂತರ ಅದಕ್ಕೆ ಎದೆಗೊಟ್ಟು ನಿಲ್ಲದ ವಿನಹ ಗತ್ಯಂತರ

ವಿಲ್ಲ ( ಸುಭದ್ರಾ ಸೌದಾಮಿನಿ ಹೋಗುವರು) ಅರ್ಜುನಾ-ಭೀಮಾ, ನೀವು ನಡೆಯಿರಿ. ಇದು ಶೋಕ ಮಾಡುತ್ತಾ ಕೂಡುವ ಸಮಯವಲ್ಲ.

**ಭೀಮ** :— ಇದೋ ನೋಡು! ಅಶ್ರುಗಳನ್ನು ಒರಿಸಿದೆನು ! ಈ ಶೋಕದಿಂದ ಪ್ರಜ್ವಲಿತವಾದ ಅಗ್ನಿಯನ್ನು ಅಶ್ರುಧಾರೆಯಿಂದ ಅಲ್ಲ—ಶತ್ರುಗಳ ರಕ್ತದಿಂದ ಈ ಭೀಮಸೇನನು, ನೊಂದಿಸಿ ಬಿಡುವನು. ಗದೆಯ ಒಂದೇ ಪ್ರಹಾರದಿಂದ ಯಾವತ್ತೂ ಕೌರವರಿಗೆ, ನರಕದ ಮಾರ್ಗವನ್ನೇ ತೋರಿಸುವೆನು.

**ಅರ್ಜುನ** :— ನಾಳಿನ ದಿವಸ ಅಸ್ತಾಚಲಕ್ಕೆ ಹೋಗುವ ಸೂರ್ಯನ ಕಿರಣಗಳಿರಾ ! ನೀವೇ ಜಯದ್ರಥನ ವಧಕ್ಕೆ ಸಾಕ್ಷಿದಾರರಾಗಿ ನನ್ನ ಅಭಿಮನ್ಯುವಿನ ಭಯಂಕರ ಪ್ರತೀಕಾರದ ಆನಂದವಾರ್ತೆಯನ್ನು, ಸ್ವರ್ಗಕ್ಕೆ ಹೋಗಿ ತಿಳಿಸಿರಿ ! ದುರಾತ್ಮಾ, ಜಯದ್ರಥಾ ಇನ್ನು ಮೇಲೆ ಎಲ್ಲಿ ಪಾರಾಗಿ ಹೋಗುವೆ ? ಇದೋ ನೋಡು, ನಿನ್ನ ಮೂರ್ತಿಮಂತ ಕಾಲನು ನಿನ್ನನ್ನು ಗ್ರಾಸಿಸುವದಕ್ಕೋಸ್ಕರ, ಪ್ರತಿಜ್ಞೆಯನ್ನು ಮಾಡಿ ನಿನ್ನ ಬೆನ್ನು ಹತ್ತಿರುವನು.

**ಶ್ರೀಕೃಷ್ಣ** :— ಎಲ, ಎಲಾ ! ಪುತ್ರನ ಮರಣದ ವಿಷಯವಾಗಿ ಸೇಡು ತೀರಿಸುವ ಪ್ರಸಂಗವು ತಂದೆಗೆ ಬರಬೇಕೆ ? ಕುಟಿಲ ಕಾಲದ ದುರ್ವಿಲಾಸದ ಅಘಟಿತ ಪ್ರಸಂಗವು, ಇದಕ್ಕಿಂತಲೂ ಮತ್ತಾವುದಿದೆ?

ರಾಗ ಶುದ್ಧ ಕೇದಾರ, ತಾಳ ಏಕ್ಕಾ

ಕುಟಿಲಗತಿಯ ಪರಮಾಶ್ಚರ್ಯ ಗಹನ ಲೀಲೆಯಾ ಪರಿಯಾ ‖ ಪಲ್ಲ ‖
ಕರಿಣ ಕರ್ಮಘಟನೆಯಾ । ಅರಿವರಾರು ನಾ ಕಾಣೆ ‖ ಅನುಪಲ್ಲ ‖
ಸತಿಸುತಮೋಹಾತುರದೆ । ಪತಿತನಾಗಿ ಪರಗತಿಯಾ ।
ಪಥವಗಾಣದೇ ನಿರುತಾ । ಅತಿ ಬಳಲುವ ಪಾಮರಾ ‖ ೧ ‖



# ಮೂರನೆಯ ಪ್ರಸಂಗ

(ವನಪ್ರದೇಶ, ಮೇಘನಾದನು ಖಡ್ಗವನ್ನು ತಕ್ಕೊಂಡು ಗಾಬರಿಯಾಗಿ ಪ್ರವೇಶಿಸುವನು)

**ಮೇಘಾ** :— ಯುದ್ಧಕ್ಕೆ ಹೋಗುವದಕ್ಕೋಸ್ಕರ ನಮ್ಮ ಹೆಂಡತಿಯು ನಮಗೆ ಆಜ್ಞೆಯನ್ನು ಮಾಡಿದಳು; ಆದರೆ ಅಲ್ಲಿಗೆ ಹೋಗಿ ನಾವು ಮಾಡುವ ಶತಕೃತ್ಯವೇನು ? ಇದನ್ನೇನು ಆ ಶಟವಿಯು ಸೂಚಿಸಲಿಲ್ಲ. ಕೈಯಲ್ಲಿ ಕತ್ತಿಯನ್ನು ಹೇಗೆ ಹಿಡಿಯಬೇಕೆಂಬ ವಿಷಯವು ನನಗೆ ಏಕೆ, ಮೂರ್ಖಶಿರೋಮಣಿ

ಗಳಾನ ತಮ್ಮ ತೀರ್ಥರೂಪರಿಗೂ ಕೂಡ ಗೊತ್ತಿರಲಿಲ್ಲಾ. ತಂದೆಯಂತೆ ಮಗನು. ಆದರೆ ದೈವದ ಗತಿಯೇ ವಿಪರೀತವು. ಯುದ್ಧವು ಪ್ರಾರಂಭವಾದ ಕೂಡಲೆ, ಆ ಕಂದಕದಲ್ಲಿ ತಲೆಬಗ್ಗಿಸಿ ಅಡಗಿಕೊಂಡು ಕುಳಿತವನು, ಯುದ್ಧವು ಸಮಾಪ್ತವಾದ ಸೂಚನೆಯು ಗೊತ್ತಾದ ಕೂಡಲೆ ಇದೊ ಹೊರಗೆ ಬಂದೆನು. ಅತ್ತ ಕಡೆಗೆ ಕಂದಕದಲ್ಲಿ ನಾನು—ನನ್ನ ದೈವಗತಿಯನ್ನು ಕುರಿತು ಅಳುತ್ತ ಕುಳಿತಿದ್ದೆನು. ಇತ್ತಕಡೆಗೆ ಈ ಮಲ್ಲವೀರರು ಯುದ್ಧ ಮಾಡುತ್ತಿದ್ದರು. ಸುಮ್ಮನೆ ಸಾಯುವದಕ್ಕೆ ಏಕೆ ಯುದ್ಧ ಮಾಡುತ್ತಾರೋ ಯಾರಿಗೆ ಗೊತ್ತು ! ಆದರೆ ನನ್ನ ದೈವವು ತನ್ನ ಕಾರ್ಯವನ್ನು ಸಾಧಿಸಿತು. ಅಲ್ಲಲ್ಲಿಯೇ ನಿಂತು ಕೊಂಡಿದ್ದ ರಕ್ತದ ಕುಣಿಯಲ್ಲಿ ಸ್ವಲ್ಪ ತಪ್ಪಿ ಕಾಲು ಜಾರಿ ಬಿದ್ದು, ಈ ರಕ್ತದ ರಂಗಪಂಚಮಿಯ ಗುರ್ತು ನಮ್ಮ ಮೇಲೆ ಸ್ಪಷ್ಟವಾಗಿ ಕಾಣಿಸಹತ್ತಿತು. ನಮ್ಮ ಪರಾಕ್ರಮವು ನೋಡಿದರೆ ಶಂಖ ! ಗುರ್ತು ನೋಡಿದರೆ ಮಹಾಬಿಂಕ! ಇನ್ನುಮೇಲೆ ಈ ಮೇಘನಾದನಿಗೆ ಶೂರನಲ್ಲವೆಂದು ಅನ್ನುವ ಧೈರ್ಯವು ಯಾವನಿಗಿರುವದು. ಆದರೆ ಈ ಕಾಲಸಪ್ಪಳವು ಯಾರದು ? ಸತ್ತಂತಹ ಸಿಪಾಯಿಗಳ ಭೂತಗಳು, ಈ ಅಂಧಃಕಾರದಲ್ಲಿ ಸಂಚರಿಸುತ್ತ ಬರುವವೋ ಅಥವಾ ಜೀವಂತನಾದ ನಾನೇ ಪ್ರೇತನಾದೆನೋ ? ಅಲ್ಲದೆ ಈ ರಣದಲ್ಲಿಯ ಪ್ರೇತಗಳೇ ಜೀವಂತವಾದವೋ—ಹೇಗೆ ತಿಳಿಯಬೇಕು. ಛೇ-ಛೇ-ಪ್ರೇತಕ್ಕೆ ಜೀವಬರುವುದೆಂದರೇನು—ತೀರ ಅಶಕ್ಯ. (ಅತ್ತಿತ್ತ ತಿರುಗಾಡುವನು. ಪರದೆಯಲ್ಲಿ ನಾಥಾ, ನಾಥಾ, ನಿಮ್ಮನ್ನು ಎಲ್ಲಿ ಹುಡುಕಲಿ.) ಅಯ್ಯೋ ವಿಧಿಯೇ, ಇದು ಸತ್ತಂತಹ ಪ್ರೇತವಲ್ಲ ಜೀವಂತ ಪ್ರೇತವಿದೆ. ಆದರೆ ಸಂಪೂರ್ಣ ಪ್ರೇತವೋ ಅಥವಾ ಮುಂಡವಿಲ್ಲದ್ದೋ—ಇದು ಕತ್ತಲಲ್ಲಿ ಚನ್ನಾಗಿ ಕಾಣುವದಿಲ್ಲ. (ಪರದೆಯಲ್ಲಿ ಪೂರ್ವೋಕ್ತ) ಇದು ಸ್ತ್ರೀ ಧ್ವನಿಯಂತೆ ಕೇಳುತ್ತದೆ ಪಿಶಾಚಿನಿಯೊ ಅಥವಾ ಯಾವಳಾದರೂ ಡಾಕಿನಿಯೋ, ಅಲ್ಲದೆ ನನ್ನನ್ನು ಶೋಧಿಸುತ್ತ ನನ್ನ ಪ್ರಿಯಳೆ ಬಂದಿರಬಹುದೋ ? ಪಾಪ ಬಡಪ್ರಾಣಿಯು ನಾನು ಸತ್ತಿರುವೆನೆಂದು ಕಾತರೆಯಾಗಿ ಶೋಕಿಸುವಂತೆ ಕಾಣುವುದು- ಸರಿ—ಸರಿ— ಈ ಸಂಕ್ರಾಂತಿ ಯು ನಮ್ಮಮೇಲೆ ಬಂದಿತು. ಇನ್ನುಮೇಲೆ ನಾನಾದರೂ ಸತ್ತವನಂತೆ ನಟನೆಯನ್ನು ತೋರಿಸುತ್ತ ಚಮತ್ಕಾರ ಮಾಡುತ್ತೇನೆ.

**ಉತ್ತರಾ** :— ನಾಥಾ ನಿಮ್ಮ ಮನೋಹರ ಮೂರ್ತಿಯನ್ನು ಎಲ್ಲಿ ಕಾಣಲಿ ? ನಿಮಗೋಸ್ಕರ ಈ ರಣಾಂಗಣವನ್ನೆಲ್ಲ ಸುತ್ತು ಹಾಕಿದೆನು.

**ಮೋಘ** :— (ಸ್ವ) ಆದರೆ ಇತ್ತಕಡೆಗೇತಕ್ಕೆ ಬಂದೆ ನಮ್ಮ ಹತ್ತರ. ಸುಮ್ಮನೆ ?

**ಉತ್ತರಾ** :— ನಾಥಾ, ನಿಮ್ಮ ಮನೋಹರ ಮೂರ್ತಿಯನ್ನು ಎಲ್ಲಿ ಕಾಣಲಿ ? ಭ್ರಮಿಷ್ಟಳಾಗಿ ಎಲ್ಲಿಯವರೆಗೆ ಹೀಗೆ ತಿರುಗಲಿ ? (ನೋಡಿ) ಅಮ್ಮಯ್ಯಾ ಯಾರು ? ಯಾರದು ?

**ಮೋಘ** :— (ಸ್ವ) ಜೀವವಿದ್ದು ಸತ್ತವನಂತೆ ಇರುವ ಮಹಾವೀರನು.

**ಉತ್ತರಾ** :— ಮಾತಾಡುವದಿಲ್ಲವೇಕೆ ?

**ಮೋಘ** :— ಸತ್ತಂತಹ ಮನುಷ್ಯನು ಹೇಗೆ ಮಾತಾಡುವನು ? (ಸ್ವ) ಆದರೆ ಇವಳು ನಮ್ಮವಳಲ್ಲ; ಯಾವಳಾದರೂ ಪರಸ್ತ್ರೀ; ಅಂದಮೇಲೆ ಚಮತ್ಕಾರವನ್ನು ಮಾಡುವದಕ್ಕೇನೂ ಸಾಧ್ಯವಿಲ್ಲ. ಇನ್ನುಮೇಲೆ ಇಲ್ಲಿಂದ ಮೆಲ್ಲನೆ ಓಡಿ ಹೋಗೋಣ. ಇಲ್ಲನಾದರೆ ಪ್ರಸಂಗವು ಮೈಮೇಲೆ ಬಂದೀತು. (ಮೆಲ್ಲನೆ ಹೋಗಹತ್ತುವನು)

**ಉತ್ತರಾ** :— ತಡೆಯಿರಿ ! ತಡೆಯಿರಿ ! ಯಾರು ನೀವು ?

**ಮೋಘ** :— (ಭಯದಿಂದ) ಅಯ್ಯೋ ವಿಧಿಯೆ–ಭೂತವು–ಭೂತಪ್ರ ಸತ್ತೆನು, ಸತ್ತೆನು. ನನ್ನನ್ನು ಯಾರಾದರೂ ರಕ್ಷಿಸಿರಿ.

**ಉತ್ತರಾ** :— ಭಯಪಡಬೇಡಿರಿ, ಯಾರು ನೀವು, ಭಯಪಟ್ಟಿರಾ ?

**ಮೋಘ** :— ಹಾ–ಹಾ–ಹಾಗೇನು ಭಯಪಟ್ಟಿಲ್ಲಾ—ನಾನೊಬ್ಬ ಯುದ್ಧದೊಳಗಿಂದ ಓಡಿ ಬಂದ ಮಹಾವೀರನು. ನಾನು ರಣಾಂಗಣದಲ್ಲಿ ಒಬ್ಬನ ಶಿರಸ್ಸನ್ನಾದರೂ ಹಾರಿಸದಿದ್ದರೂ, ಒಳ್ಳೇ ಚಾತುರ್ಯದಿಂದ ಸ್ವಂತದ ಶಿರಸ್ಸನ್ನು ಇನ್ನೂ ಕಾದುಕೊಂಡಿದ್ದೇನೆ. ಅಮ್ಮಾ, ಎರಡನೆಯವರ ಶಿರಸ್ಸನ್ನು ಹಾರಿಸುವದಕ್ಕಿಂತಲೂ, ಸ್ವಂತದ ಶಿರಸ್ಸನ್ನೇ ಕಾಯ್ದುಕೊಳ್ಳುವುದಕ್ಕೆ ತಲೆ ಮೆದುಳನ್ನು ಹೆಚ್ಚು ಖರ್ಚು ಮಾಡಬೇಕಾಗುವುದು. ಶತ್ರುಗಳ ಕೂಡ ಕಾದಾಡುವ ರೀತಿಯು ನನಗೆ ಗೊತ್ತಿಲ್ಲದಿದ್ದರೂ, ರಣಾಂಗಣದಿಂದ ಮೆಲ್ಲನೆ ಕಾಲ್ತೆಗೆದು ಓಡಿ ಹೋಗುವಂಥ ಧೀರನು ನನ್ನ ಹೊರತು ನಿಮಗೆ, ಮತ್ತಾರು ದೊರೆಯಲಿಕ್ಕಿಲ್ಲ; ಮತ್ತೆ ಈ ಪಲಾಯನದ ವಿದ್ಯೆಯನ್ನು ಪರಾಕ್ರಮಶಾಲಿ ನಾನೊಬ್ಬನು ಮತ್ತು ನಮ್ಮ ಮೂರ್ಖಶಿರೋಮಣಿ ತೀರ್ಥರೂಪರು ಇಬ್ಬರೇ ಬಲ್ಲರು.

**ಉತ್ತರಾ** :— ಈ ದಿವಸದ ಯುದ್ಧದ ಸಮಾಚಾರವು ತಮಗೆ ಗೊತ್ತಿರಬಹುದಲ್ಲವೇ ?

**ಮೇಘಾ** :— ಅಮ್ಮಾ, ಆ ವಾರ್ತೆಯನ್ನು ಏನು ಹೇಳಲಿ ? ಪಾಂಡವರ ಸೋತರು. ಕೌರವರು ಚಕ್ರವ್ಯೂಹದಲ್ಲಿ ನಾಲ್ಕು ದಿಕ್ಕಿನಿಂದ ಮುತ್ತಿ, ಅಭಿಮನ್ಯು ಮಹಾರಾಜನನ್ನು ಸ್ವರ್ಗಕ್ಕೆ ಅಟ್ಟಿದರು.

**ಉತ್ತರಾ** :— ಹಾಯ್, ಹಾಯ್ ! ನನ್ನ ಸೌಭಾಗ್ಯಕ್ಕೆ ಸಿಡಿಲು ಬಡಿಯಿತು. ನಾಥಾ, ನಾಥಾ. (ಬೀಳುವಳು)

**ಮೇಘಾ** .— ಎಲಾ, ಇನ್ನೇನು ಮಾಡಬೇಕು ? ಧರ್ಮ ಮಾಡುವುದಕ್ಕೆ ಹೋದರೆ, ಅದು ಕರ್ಮವಾಯಿತು. ಇವಳು ಯಾರು ? ಮೂರ್ಛೆಬಂದು ಬಿದ್ದಳು ! ಈ ಸ್ಥಳದಲ್ಲಿ ನೀರು ಎಲ್ಲಿ ಸಿಗುವುದು ? ಛೆ ಛೆ, ಕಣ್ಣೀರು ತೆಗೆಯುವ ಪ್ರಸಂಗವೇ ಇದು. ನನ್ನ ಜೀವವೇ ನೀರು ನೀರಾಗಿ ಹೋಗಿದೆ. (ಹೋಗುವನು)

**ಉತ್ತರಾ** :— (ಎಚ್ಚತ್ತು) ದುರ್ದೈವವೆ, ಎಷ್ಟು ಜನ್ಮದ ಸೇಡು ತೀರಿಸಿಕೊಂಡೆಯೋ ಕಾಣೆ. ನನ್ನ ಸೌಭಾಗ್ಯ ಸೂರ್ಯನು ಮುಳುಗಿದನು. ಸಂಸಾರ ಸೌಖ್ಯವು ಮಣ್ಣುಪಾಲಾಯಿತು ಪ್ರಾಣೇಶ್ವರಾ, ತಮ್ಮ ಸುಕುಮಾರ ದೇಹದ ಕೊನೆಯ ದರ್ಶನವಾದರೂ ಒಂದು ಸಲ ಈ ಪಾಪಿಗೆ ಲಭಿಸಲಿಲ್ಲವಲ್ಲ !

ರಾಗ ಖಮಾಚ ಮಾಂಡ, ತಾಳ ದೀಪಚಂದಿ

ಕಾಂತೆಯನಗಲಿ ಪೋದೆಯಾ । ಪದುಳನಾಥಾ ॥ ಪಲ್ಲ ॥
ಖಲನಾದ ವಿಧಿ ನಿನ್ನ, ಸೆಳೆದುಕೊಂಡೊಯ್ದನೆ ॥
ಬಲು ಪಾಪಿನಾನಯ್ಯೊ ! ! ಇಳಿಯೊಳ್ ಜೀವಿಸಲೆಂತೂ ॥ ೧ ॥

(ಆಕ್ರೋಶ ಮಾಡುತ್ತ ಹೋಗುವಳು. ಮೇಘನಾದನು ಬರುವನು)

**ಮೇಘಾ** :— ಅಯ್ಯೋ ಪಾಪ, ಎಲ್ಲಿ ಹೋದಳು ? ಹೇಗೆ ಎಚ್ಚತ್ತಳು? ಆದರೆ ಇನ್ನುಮೇಲೆ ನಾವು ಕೂಡ ನಮ್ಮ ಮಾರ್ಗವನ್ನು ಸ್ವಲ್ಪ ಸುಧಾರಿಸೋಣ. (ಹೋಗಹತ್ತುವನು. ಪುರುಷವೇಷದಲ್ಲಿ ಸೌದಾಮಿನಿಯು ಬರುವಳು)

**ಸೌದಾ** :— ಅಹಹಾ ! ಈ ಲತೆಗಳನ್ನು ಮತ್ತು ವಸಂತಾಗಮನದಿಂದ ಸೌಭಾಗ್ಯ ಸಂಪನ್ನವಾದ ಈ ವನಶ್ರೀಯ ವಿಲಾಸವನ್ನು ನೋಡಿದರೆ, ನಮ್ಮ ದೇವಿಯವರ ಕೋಮಲವಾದ ಜೀವನಲತೆಯ ಭವಿತವ್ಯತೆಯ ಕಲ್ಪನೆಯು ನನ್ನ ಸ್ಮರಣಕ್ಕೆ ಬರುವದು.

**ಮೋಘ** :— ಏನು ಸ್ವಾಮಿ ಸಭ್ಯಗೃಹಸ್ಥನೆ, ಕೊಂಚ ಮನುಷ್ಯರನ್ನು ನೋಡಿ ನಡೆಯಿರಿ.

**ಸೌದಾ** :— ಮನುಷ್ಯರನ್ನು ನೋಡಿಯೇ ನಡೆದಿರುವೆನು.

**ಮೋಘ** :— ಅಂದರೆ ! ನಾನು ನಿಮಗೆ ಮನುಷ್ಯರಂತೆ ಕಾಣುವ ದಿಲ್ಲವೊ ಹೇಗೆ ? ನಡೆ ದಾರಿಯನ್ನು ಬಿಡು.

**ಸೌದಾ** :— ( ಸ್ವ) ದೇವಿಯವರನ್ನು ಹುಡುಕಿ, ಹುಡುಕಿ, ನಾನಂತೂ ತೀರಾ ಬೇಸತ್ತೆನು.

**ಮೋಘ** :— (ಗರ್ಜಿಸಿ) ಯಾಕೆ ಕೇಳಿಸುವದಿಲ್ಲವೇ ? ಹಾಗಾದರೆ ಕಿವಿಯ ಹಾಲಿಗಳನ್ನು ತಿರುಗಿಸುತ್ತೇನೆ.

**ಸೌದಾ** :— ( ಸ್ವ )ಓಹೋ ಇದು ನಮ್ಮ ಪತಿರಾಜರ ಸವಾರಿಯು. ಈ ಪುರುಷವೇಷದಲ್ಲಿ ಇವರಿಗೆ—ನನ್ನ ಗುರ್ತು ಸಿಕ್ಕುವದೇಯಿಲ್ಲ. ಹಾಗಾ ದರೆ ಚನ್ನಾಗಿ ಇವರಿಗೆ ಫಜೀತಿಯನ್ನು ಮಾಡೋಣ.

**ಮೋಘ** :— ಎಲೋ ಕೋಣಪ್ಪಾ, ಏ ಮಾತಾಡುವದಿಲ್ಲವೇಕೆ ? ಹೀಗೇಕೆ ಮೂಕನಂತೆ ನಿಂತಿರುವೆ ?

**ಸೌದಾ** :— ಯಾಕೆ ನಾಲಿಗೆಯು ಬಹಳ ಉದ್ದವಾಯಿತು ?

**ಮೋಘ** :— ಯಾಕೆ ಬಹಳ ಬೆದರಿಸಿ ವಿಚಾರಿಸುವಿರಿ ! ನಾನು ಯಾರೆಂದು ತಿಳಿದಿರುವಿರಿ !

**ಸೌದಾ** :— ನಾನೊಬ್ಬ ಮಹಾವೀರನು ! ನೀನು ಯಾರು ?

**ಮೋಘ** :— ನಾನಾದರೂ ಒಬ್ಬ ಪ್ರಚಂಡ ವೀರನಿರುವೆನು ! ಕಾಣುವು ದಿಲ್ಲವೇ?

**ಸೌದಾ** :— ಕಾಣುವದು. ಆದರೆ ಜಗತ್ತಿನಲ್ಲಿ ಮೇಲೆ ಕಾಣಿಸುವಂತೆ ಒಳಗೆ ಏನೂ ಸತ್ವವಿರುವದಿಲ್ಲ.

**ಮೋಘ** :— ಹಾ ! ಹಾಗಾದರೆ ಈ ರಕ್ತವು ನಿಮಗೆ ಏನು ಹೇಳುವದು?

**ಸೌದಾ** :— ಇದು ವೀರರ ರಕ್ತವಲ್ಲವೆಂದು ಹೇಳುವದು. ವೀರನೆಂದು ಬೊಗಳುತ್ತೀ—ಆದರೆ ಸರಿಯಾಗಿ ಕತ್ತಿಯನ್ನು ಹಿಡಿಯಲಿಕ್ಕೆ ಬರುವದಿಲ್ಲ. ವೀರನೋ—ಕವಡಿ ಪೀರನೋ ?

**ಮೋಘ** :— ಹಾ ! ನೆಟ್ಟಗೆ ಮಾತಾಡು. ಕತ್ತಿಯನ್ನು ತಿರುವುಮುರ ವಾಗಿ ಅಥವಾ ಬೇಕಾದ ಹಾಗೆ ಹಿಡಿಯುವೆನು. ಅದನ್ನು ಕೇಳುವುದಕ್ಕೆ ನಿನಗೇನು ಅಧಿಕಾರವಿದೆ; (ಸ್ವಗತ) ಇನ್ನು ಮೇಲೆ ಪ್ರಸಂಗವು ಕಠಿಣವಿದೆ.

**ಸೌದಾ** :— ಯಾರಯ್ಯಾ ನೀನು-ಯಾವ ಪಕ್ಷದ ವೀರನು ? ನಿನ್ನದು ಯಾವ ಪಕ್ಷ ?

**ಮೇಘ** :— ಕೃಷ್ಣ ಪಕ್ಷ ! ನನ್ನ ಜನ್ಮವು ಕೃಷ್ಣ ಪಕ್ಷದಲ್ಲಿಯಾಗಿದೆ.

**ಸೌದಾ** :— ನಿನ್ನ ಜನ್ಮದ ವಿಚಾರವು ಹಾಳಾಗಿ ಹೋಗಲಿ ಬಿಡು, ಯಾರಿಗೆ ಬೇಕಾಗಿದೆ !

**ಮೇಘ** — ಹಾಗಾದರೆ ಅಯ್ಯಾ , ನನ್ನ ಮರಣದ ವಿಚಾರವನ್ನು ಹೇಳಬೇಕೆನ್ನುವಿಯೋ ಹೇಗೆ ?

**ಸೌದಾ** :— ನಿನ್ನದು ಪಾಂಡವ ಪಕ್ಷವೋ, ಕೌರವ ಪಕ್ಷವೋ ? ಪುಣ್ಯದ ಪಕ್ಷವೋ, ಪಾಪದ ಪಕ್ಷವೋ ?

**ಮೇಘ** :— ಇದೋ ನೋಡು. ಪಾಪ ಪುಣ್ಯದ ವಿಚಾರವು ನಿನಗೇ ಇರಲಿ; ಆದರೆ ನನ್ನದು ರಾಜಪಕ್ಷವು

**ಸೌದಾ** :— ರಾಜಪಕ್ಷವೆಂದರೇನು ಸ್ಪಷ್ಟವಾಗಿ ಹೇಳು ?

**ಮೇಘ** :— ಸ್ಪಷ್ಟವಾಗಿ ಏನು ಹೇಳಲಿ ನೀನೇ ಸ್ವಲ್ಪ ತಲೆ ಖರ್ಚು ಮಾಡು; ಅಂದರೆ ತಾನೇ ಗೊತ್ತಾಗುವದು ರಾಜಪಕ್ಷವೆಂದರೆ ಪ್ರಜಾಪಕ್ಷ ವನ್ನು ಯಥೇಚ್ಛವಾಗಿ ನಿಂದಿಸಿ, ರಾಜಪ್ರತಿನಿಧಿಗಳ ಬಾಲವನ್ನು ಬಡಿದು, ದುರ್ಬಲರನ್ನು ಹಿಂಸಿಸಿ ಬಂದ ಹಣದಿಂದ ಸುಖದಿಂದ ಸಂಸಾರ ಮಾಡುವದೇ ನಮ್ಮ ಜನ್ಮದ ರಹಸ್ಯವು. ಇದರ ಮೇಲಿಂದ ನನ್ನದು ಯಾವ ಪಕ್ಷವೆಂಬು ದನ್ನು ನೀವೇ ಗುರುತಿಸಿರಿ–ನೋಡೋಣ (ಸ್ವಗತ) ಪ್ರಸಂಗವನ್ನು ಸಾಧಿಸಿ ಹೀಗೆ ಏನಾದರೊಂದು ಗತ್ತುಮಾಡಿ ಪಾರಾಗಬೇಕು.

**ಸೌದಾ** :— ಎಲೋ, ಕಳ್ಳಾ, ಹಾಗಾದರೆ ನೀನು ಪಾಂಡವಪಕ್ಷದವ ನೇನು ?

**ಮೇಘ** — ಏನು ಈ ಮೇಘನಾದನು ಪಾಂಡವ ಪಕ್ಷದವನೆಂದು ತಿಳಿದಿಯಾ. ಸರಿ, ನಿನ್ನ ಬುದ್ಧಿಯು ಶುಂಭವಿದೆ. ಎಲೊ ಈ ರಾಜನಿಷ್ಠ ವೀರನು ಕೌರವ ಪಕ್ಷದವನು ತಿಳಿಯಿತೆ.

**ಸೌದಾ** :— ಏನು ಕೌರವ ಪಕ್ಷದವನೆ ? ಹೂ, ಹಾಗಾದರೆ ಯುದ್ಧಕ್ಕೆ ಸಿದ್ಧನಾಗು.

**ಮೇಘ** :— (ಸ್ವಗತ) ಓಹೋ, ಈತನು ಪಾಂಡವಪಕ್ಷದವನಂತೆ ಕಾಣುವನು. ಸಮಯವನ್ನು ಸಾಧಿಸಿ ಏನಾದರೊಂದು ಸುಳ್ಳು ಹೇಳಿ ಪಾರಾಗ

ಬೇಕು. (ಪ್ರಕಾಶ) ಏನು ರಾಯರೆ, ನೀವು ಮೋಸ ಹೋದಿರಿ! ನೀಟಾಗಿ ವಿಚಾರಿಸಿದರೆ ನಾನು ಪಾಂಡವ ಪಕ್ಷದವನಿರುವೆನು.

**ಸೌದಾ** :— ಏನು ಪಾಂಡವ ಪಕ್ಷದವನೆ. ತೆಗೆದುಕೊ ಹಾಗಾದರೆ ದೇವರ ಹೆಸರನ್ನು—

**ಮೋಘ** : – (ಸ್ವಗತ) ಎಲಾ, ಒಳ್ಳೇ ಕಷ್ಟಬಂತು. ಪಾಂಡವ ಪಕ್ಷದವನೆಂದರೂ ಮರಣ. ಕೌರವ ಪಕ್ಷದವನೆಂದರೂ ಮರಣ. (ಪ್ರ) ಇದೋ ನೋಡು, ನಾನು ಯಾವ ಪಕ್ಷದವನೂ ಅಲ್ಲ ಕೌರವರು ಸತ್ತರೂ ನೈಲಿಗಿ ಬರುವಂತಿಲ್ಲ. ಪಾಂಡವರು ಸತ್ತರೂ ನನಗೆ ವಿಷಾದವೆನಿಸುವುದಿಲ್ಲ. ನನ್ನದು ಸ್ವತಂತ್ರ ಪಕ್ಷವು. ನನ್ನ ಮತಗಳು ಕ್ಷಣಕ್ಷಣಕ್ಕೆ ಬದಲಾಗುವವು. ಆದರೆ ಆ ಮತಕ್ಕೆ ರೀತಿಯಿಲ್ಲ. ಭೀತಿಯಿಲ್ಲ. ಕೋತಿಯ ಸಂಪ್ರದಾಯವು. ಹೊಟ್ಟೆಗಿಲ್ಲದೆ ಬೇಕಾದವರು ಸಾಯಲಿ, ಆದರೆ ಹೋಳಿಗೆ ತುಪ್ಪವನ್ನು ತಿಂದು ಯಾವಾಗಲು ಮತ್ತ ನಾಗಿರುವುದೇ ನಮ್ಮ ಮನೆತನದ ಶ್ರೇಷ್ಠ ಸಾಂಪ್ರದಾಯವು. ಆದರೆ ಅದು ಹೋಗಲಿ. ನೀನು ಯಾವ ಪಕ್ಷದವನು? (ಸಮೀಪಕ್ಕೆ ಹೋಗ ಹತ್ತುವನು)

**ಸೌದಾ** :— ದೂರಾಗು ಮೂರ್ಖಾ, ಪ್ರಸಂಗವು ಮೈಮೇಲೆ ಬಂದಿತೆಂದು, ಹೀಗೆ ಬಾಲವನ್ನು ಗುಂಡಾಡಿಸಲಿಕ್ಕೆ ಪ್ರಾರಂಭಿಸಿದಿಯಾ? ಒಳ್ಳೇ ಮಾತುಗಳಿಂದ ಯುದ್ಧಕ್ಕೆ ಸಿದ್ಧನಾಗು.

**ಮೋಘ** ಃ— (**ಸ್ವ**) ಬಂತು, ನಮ್ಮ ಪ್ರಾಣಕ್ಕೆ ಚಕ್ರವು. ಮೋಘನಾದಾ–ಬೆಳಿಗ್ಗೆ ಎದ್ದು ನೀನು, ಯಾರ ಮುಖವನ್ನು ನೋಡಿದಿಯೋ.? ಯಾರ ಮುಖವನ್ನು ಏಕೆ, ಕನ್ನಡಿಯಲ್ಲಿ ಸ್ವತಃ ನನ್ನ ಮುಖವನ್ನೇ ನೋಡಿರುವೆನು? (**ಪ್ರ**) ಇದೊ, ಯುದ್ಧಕ್ಕೆ ನಾನು ಒಂದೇ ಕಾಲಮೇಲೆ ಸಿದ್ಧನಿದ್ದೇನೆ. (ಕಾಲು ಮೇಲೆ ಮಾಡುವನು) ನಾನೇನು ಹೆಣದತ್ತನಲ್ಲ-ರಣದತ್ತನು.

**ಸೌದಾ** :— ಸಾಕುಮಾಡು ಪೌರುಷವನ್ನು. ತಿಳಿಯಿತು ಪರಾಕ್ರಮವು,

**ಮೋಘ** ಃ— ನನ್ನ ಪರಾಕ್ರಮವು ನಿನಗೆ ಗೊತ್ತಾಯಿತಲ್ಲವೆ! ಹಾಗಾದರೆ ಆ ಕತ್ತಿಯನ್ನು ಒರೆಯಲ್ಲಿ ನೂಕು. ಯುದ್ಧವನ್ನು ಸಾಕುಮಾಡು.

**ಸೌದಾ** :— ಭಲೆ, ಭಲೆ, ಉತ್ತರಕುಮಾರಾ, ಇದೇ ಏನು ನಿನ್ನ ಶೌರ್ಯ- (ನಗುವನು)

**ಮೋಘ** :— ನನ್ನನ್ನು ನೋಡಿ ಪರಿಹಾಸ್ಯ ಮಾಡುವಿಯಾ ? ಅಪ ಮಾನವು ಬಲಾಢ್ಯವೀರನಾದ ನನ್ನ ಅವಮಾನವು ! ನಾಕು ಇನ್ನುಮೇಲೆ ಯುದ್ಧವನ್ನು ಮಾಡುವದಿಲ್ಲ.

**ಸೌದಾ** :— ಅಪಮಾನವಾಯಿತೆಂದು ಯುದ್ಧ ಮಾಡುವದಿಲ್ಲವೆ ? ಅಪಮಾನದ ಸೇಡು ತೀರಿಸಿಕೊ ?

**ಮೋಘ** :— ಏನು ಸೇಡು ? ಯಃಕಶ್ಚಿತ ಶಿಪಾಯಿಯ ಮೇಲೆ ! ಈ ವೀರನಿಗೆ ಅದು ಭೂಷಣವಲ್ಲ.

**ಸೌದಾ** :— ನೀನು ಯುದ್ಧಮಾಡು ಅಥವಾ ಬಿಡು. ನಾನು ನಿನ್ನ ಜೊತೆಗೆ ಯುದ್ಧಮಾಡತಕ್ಕವನೇ.

**ಮೋಘ** :— ಇದೊಳ್ಳೆ ಬಲತ್ಕಾರ. ನನ್ನ ಇಷ್ಟವಿಲ್ಲದೆ ನನ್ನ ಕೂಡ ಯುದ್ಧಮಾಡುವಿಯೇನು ?

**ಸೌದಾ** :— ನಿನ್ನ ಇಷ್ಟವನ್ನು ಕೇಳತಕ್ಕವರಾರು ? ಹೂ ಯುದ್ಧಕ್ಕೆ ಸಿದ್ಧನಾಗು.

**ಮೋಘ** :— ನಿನ್ನ ಹಟವೆ ಇದ್ದರೆ, ಇದೊ ! ನಾನು ಯುದ್ಧಕ್ಕೆ ಸಿದ್ಧನಾಗುವೆನು. ನನ್ನದೊಂದು ಕಾರ್ಯವಿರುವದು ಅದನ್ನು ಮಾತ್ರ, ನೀನು ಮಾಡಬೇಕು.

**ಸೌದಾ** :— ಅದೇನು ಹೇಳು.

**ಮೋಘ** :— ಈ ಯುದ್ಧದಲ್ಲಿ ಒಂದು ವೇಳೆ ನಾನು ಮಡಿದರೆ, ನನ್ನ ಪ್ರೇತವನ್ನು ಮಾತ್ರ ಹುಗಿಯಬೇಡ.

**ಸೌದಾ** :— ಯಾಕೆ ?

**ಮೋಘ** :— ಯಾಕೆಂದರೆ ಇಷ್ಟೆ, ನಾನು ಮಡಿದ ಮೇಲೆ, ನನ್ನ ಹೆಂಡತಿಯು ಸತಿ ಹೋಗುವದಕ್ಕೆ ಶೋಕಿಸುತ್ತ ಇಲ್ಲಿಗೆ ಬರುವಳು. ಆಗ್ಗೆ ಅವಳಿಗೆ ನಾನು ಕೊನೆಯ ಪ್ರೇಮಾಲಿಂಗನವನ್ನು ಹೀಗೆ ಕೊಡುವೆನು. (ಅಪ್ಪುವನು)

**ಸೌದಾ** :— ಏನು ಸತ್ತಮೇಲೆ ಪ್ರೇಮಾಲಿಂಗನವೇ ? ಒಳ್ಳೇ ಆಶ್ಚರ್ಯ!

**ಮೋಘ** :— ಇದರಲ್ಲೇನು ಆಶ್ಚರ್ಯ, ನಾನು ಸಾಯಬಹುದು; ಆದರೆ ನನ್ನ ಶರೀರವು ಹಾಗೇ ಇರುವದಲ್ಲವೆ ?

**ಸೌದಾ** :— ಆದರೆ ನಿಮ್ಮ ಹೆಂಡತಿಯು ಸತಿ ಹೋಗದಿದ್ದರೆ—

**ಮೋಘ** :— ಹೆಂಡತಿಯು ಸತಿ ಹೋಗದಿದ್ದರೆ-ನಾನು ಯುದ್ಧ ಮಾಡುವುದಿಲ್ಲ, ಸಾಯುವದಿಲ್ಲ ಅವಳು ಸತಿ ಹೋಗುವದಿಲ್ಲವೆ ಅಯ್ಯೋ-ಏನು ಮಾಡಲಿ ? ಈ ಕಾಲಕ್ಕೆ ಈ ಸ್ಥಳದಲ್ಲಿ ಅವಳು ನನ್ನ ಎದುರಿಗೆ ಇದ್ದಿದ್ದರೆ, ಹೀಗೆ ಅವಳ ಸಮಾಚಾರ ತಕ್ಕೊಳ್ಳುತ್ತಿದ್ದೆ. ಏನು ಹೇಳಲಿ, ಚಂಡಾಲಿನಿಯೇ, ಪಾತಕಿಯೇ, ಘಾತಕಿಯೇ –

**ಸೌದಾ** :— ಸುಮ್ಮನೆ ಅವಳಮೇಲೆ ಏತಕ್ಕೆ ಕೋಪಿಸುವಿರಿ ?

**ಮೋಘ** :— ಹೌದು ? ಅವಳ ಮೇಲೆ ಕೋಪಿಸುವದರಿಂದ ಏನು ಪ್ರಯೋಜನವಿದೆ.

**ಸೌದಾ** :— ನಿಮ್ಮ ಹೆಂಡತಿಯು ಪಾಪ, ಒಳ್ಳೇ ಬಡಪ್ರಾಣಿಯು !

**ಮೋಘ** :— ಏನು ಬಡಪ್ರಾಣಿಯೇ--ಅಲ್ಲ-ಕಾಲಸರ್ಪಿಣಿಯು. ನನ್ನ ಮಾತು ಕೇಳಿರಿ, ನಾನು ವೀರನು. ನಿಮ್ಮ ಜೊತೆಗೆ ಯುದ್ಧ ಮಾಡುವೆನು. ಆದರೆ, ಮೊದಲು ಮನೆಗೆ ಹೋಗಿ ಹೆಂಡತಿಯನ್ನು ವಿಚಾರಿಸಿ, ಸತಿಹೋಗುವ ವಿಷಯವಾಗಿ ಅವಳಿಂದ ವಚನ ತೆಗೆದುಕೊಳ್ಳುತ್ತೇನೆ ಆಮೇಲೆ ಮರಣಕ್ಕೆ ಸಿದ್ಧನಾಗುತ್ತೇನೆ. (ಹೋಗ ಹತ್ತುವನು)

**ಸೌದಾ** :— ಎಲ್ಲಿ ಹೋಗುವಿರಿ ? ಸ್ವಲ್ಪ ತಡೆಯಿರಿ.

**ಮೋಘ** :— ಅಮ್ಮಾ, ದೇವಿ ಜಗದಂಬೆ-ರಕ್ಷಿಸು ! ರಕ್ಷಿಸು ! ನಿನ್ನ ಕಾಲು ಬೀಳುತ್ತೇನೆ--ನನ್ನ ಹೆಂಡತಿಯು—

**ಸೌದಾ** :— (ವೇಷತೆಗೆದು) ಇದೋ ನೋಡಿ, ಇಲ್ಲಿಯೇ ನಿಂತಿರುವಳು ನಿಮ್ಮ ಹೆಂಡತಿಯು. ಯಾಕೆ ವೀರಶಿರೋಮಣಿಗಳೇ—

**ಮೋಘ** :— ಅಯ್ಯೋ ಕಷ್ಟವೆ. ಸಂಪೂರ್ಣ ದುರ್ದೆಸೆಯು

( ಓಡಿ ಹೋಗುವನು )

**ಸೌದಾ** :— ಬೆಂಕಿ ಹಚ್ಚಲಿ ಹೆಣ್ಣಿಗರಾದ ಇಂತಹ ಪುರುಷರ ಹೇಡಿತನಕ್ಕೆ.

———

# ನಾಲ್ಕನೆಯ ಪ್ರಸಂಗ

(ಸ್ಥಳ :– ಸಮರಭೂಮಿ, ದುರ್ಯೋಧನ, ದುಶ್ಯಾಸನ ಮೊದಲಾದವರ ಪ್ರವೇಶ)

**ಜಯ** :— ಆನಂದವು, ಆನಂದವು. ಈ ದಿವಸ ರಣಯಜ್ಞಕ್ಕೆ ಅಭಿಮನ್ಯುವು ಆಹುತಿಯಾದನು. ಅತ್ಯಾನಂದವು ಮಹಾನಂದವು !

**ದುಶ್ಯಾ** :— ಅಭಿಮನ್ಯುವು ಆಹುತಿಯಾಗಿಲ್ಲ. ಪಾಂಡವರ ಪರಾಕ್ರಮವೇ ಸಮರಯಜ್ಞದಲ್ಲಿ ಪ್ರಾಣಾಹುತಿಯಾಯಿತು. ಕೌರವರ ಪರಾಕ್ರಮವು ಮೇರೆ ತಪ್ಪಿ ಶಿಖರಕ್ಕೆ ಮುಟ್ಟಿತು.

**ದುರ್ಯೋ** :— ಹೇಳಿರಿ—ಹಾಗಾದರೆ— ಈ ಹಸ್ತಿನಾಪುರದ ಸಿಂಹಾಸನದ ಜಯ ಜಯಕಾರವನ್ನು ಹೇಳಿರಿ !

**ಜಯ** :— ಇಂದ್ರಪ್ರಸ್ಥವು–ಮತ್ತು ಹಸ್ತಿನಾಪುರವು– ಈ ಸಂಯುಕ್ತ ಸಾಮ್ರಾಜ್ಯದ ಸೂತ್ರಗಳನ್ನು ಲೀಲೆಯಿಂದ ಸಹಜವಾಗಿ ಹಿಡಿದು ಆಡಿಸುವಂಥ, ಸಾಮ್ರಾಟ ದುರ್ಯೋಧನ ಮಹಾರಾಜರ ಜಯ ಜಯಕಾರವನ್ನು ಹೇಳಿರಿ. ಸಾಮ್ರಾಟ ದುರ್ಯೋಧನ ಮಹಾರಾಜರ ಜಯಜಯಕಾರವು !

**ದ್ರೋಣ** :— ಧಿಕ್ಕಾರವು–ಧಿಕ್ಕಾರವು ! ಜಯ ಜಯಕಾರವೆ ? ಯಾರ ಜಯ ಜಯಕಾರವು ? ಮತ್ತು ಯಾತಕ್ಕೋಸ್ಕರ ಜಯ ಜಯಕಾರವು ?

**ಜಯ** :— ಈ ದಿವಸದ ಅಪೂರ್ವ ವಿಜಯಕ್ಕೋಸ್ಕರ ಜಯ ಜಯಕಾರವು ?

**ದ್ರೋಣ** :— ಪಾಪೀ ವಿಜಯದ ಉನ್ಮಾದದಿಂದ ತಾಳಗೆಟ್ಟ ನಿಮ್ಮ ರಾಕ್ಷಸೀ ಬುದ್ಧಿಯು, ಈ ಜಯ ಜಯಕಾರದ ಗರ್ಜನೆಯನ್ನು ಮಾಡುತ್ತಿರುವದು; ಆದರೆ ನಿಮ್ಮ ಪಾದದಡಿಯಲ್ಲಿ ಸಿಕ್ಕು ಒದ್ದಾಡುವಂತಹ ಧರ್ಮ ಮತ್ತು ನ್ಯಾಯನೀತಿಯು, ಆಕ್ರೋಶದಿಂದ, ಕೌರವರ ವಂಶವು ನಿರ್ಮೂಲವಾಗಲೆಂದು ಶಾಪಕೊಡುವದು, ನಿಮ್ಮ ಅಂತಃಕರಣಕ್ಕೆ ಕೇಳಿಸುವದಿಲ್ಲವೆ ? ಅಭಿಮನ್ಯುವನ್ನು ನೀವು ವಿಶ್ವಾಸಘಾತ ಮಾಡಿ ಸಂಹರಿಸಿದಿರಿ; ಆಗಲೆ ನಿಮ್ಮ ಭಯಂಕರ ಅಧಃಪಾತವು, ನಿಮ್ಮ ಆಸುರೀ ಕೃತ್ಯಕ್ಕೆ ಆಮಂತ್ರಣ ಕೊಟ್ಟಿತೆಂಬುದು ನಿಮ್ಮ ಬುದ್ಧಿಗೆ ಹೇಗೆ ಗೊತ್ತಾದೀತು ?

**ದುರ್ಯೋ** :— ಆಚಾರ್ಯರೆ, ಕೌರವರ ವಿಜಯೋತ್ಸವವು ನಿಮ ಗೇಕೆ ಸಂತೋಷವೆನಿಸುವದಿಲ್ಲ? ಅನ್ನದಾತೃಗಳಾದ ಕೌರವರ ಕೂಡ, ಹೀಗೆ ಅಪ್ರಾಮಾಣಿಕತನವೇ ?

**ಜಯ** :— ಕೌರವರ ಹೋಳಿಗೆ ತಿನ್ನೋಣ—ಪಾಂಡವರ ಮುಂದೆ ಕಾಳೀ ಊದೋಣ ..

**ದುಶ್ಶಾ** :— ಶೂರ ಅಂತಃಕರಣದ ವಿಜಯೋತ್ಸವವು, ಆಚಾರ್ಯರ ಮನಸ್ಸಿಗೆ ಏಕೆ ಬೇಸರವೆನಿಸುವದೋ ತಿಳಿಯದು.

**ದ್ರೋಣ** :— ಏನು ! ನಿಮ್ಮದು ಶೂರ ಅಂತಃಕರಣವೇ ! ಯಾರು ಹೇಳುವರು ! ಮತ್ಸರ ಪೂರ್ಣವಾದ ದುಷ್ಟ ಅಂತಃಕರಣದಲ್ಲಿ ಶೌರ್ಯದ ಗಂಧವೇ ಇರುವದಿಲ್ಲ. ಆದ್ದರಿಂದಲೆ ಲೋಭದಿಂದ ಪಾಪಮಯವಾದ ದುರಾಶೆಗೆ ಬಲಿಬಿದ್ದು, ಅತ್ಯಾಚಾರದ ಅಹಂಕಾರದ ಭರದಲ್ಲಿ ಕಪಟಬುದ್ಧಿಗೆ ಆಧೀನರಾಗಿ, ಹೇಡಿಗಳಾಗುವರು. ನಿಮ್ಮ ಅಂಗದಲ್ಲಿ ಶೌರ್ಯವೂ ಧರ್ಮದ ಸರಳ ಬುದ್ಧಿಯೂ ಇರುತ್ತಿದ್ದರೆ, ನಿಮ್ಮ ಭ್ರಷ್ಟಬುದ್ಧಿಯು ಕಾಪಟ್ಯದ ಗುಲಾಮಗಿರಿಯನ್ನು ಎಂದೂ ವಹಿಸುತ್ತಿದ್ದಿಲ್ಲ.

**ದುರ್ಯೋ** :— ಇದು ರಾಜಕಾರಣದ ಪ್ರಶ್ನೆಯಿದೆ. ಸಾಮ್ರಾಟ ರಾಜನು ಕೆಲವು ವೇಳೆ ಶಸ್ತ್ರದ ಶಕ್ತಿಯನ್ನು, ಕೆಲವು ಸಮಯದಲ್ಲಿ ಕುಟಿಲ ಬುದ್ಧಿಯ ಕಾರಸ್ಥಾನವನ್ನು ಉಪಯೋಗಿಸಿ, ತನ್ನ ರಾಜ ಸತ್ತೆಯನ್ನು ಕಾಯ್ದುಕೊಳ್ಳಬೇಕಾಗುವದು.

**ದ್ರೋಣ** :— ಅನ್ಯಾಯದ ಕುಟಿಲ ಬುದ್ಧಿಯಿಂದ ಸಂಪಾದಿಸಿದ ಸಾಮ್ರಾಟ ಸಿಂಹಾಸನವು, ಸತ್ಯನಿಷ್ಠೆಯ ಸರಳಬುದ್ಧಿಯಿಂದ, ಸಮೂಲ ನಷ್ಟವಾಗಿ ಹೋಗುವದು. ದುರ್ಯೋಧನಾ, ಧೃತರಾಷ್ಟ್ರನು ದೃಷ್ಟಿಯಿಂದ ಅಂಧನಾದನು: ನೀನು ವಿವೇಕದಿಂದ ಅಂಧನಾಗಬೇಡ. ದೇಶವನ್ನೇ ಧೂಳಿಗೊಳಿಸುವಂತಹ ದಾಯಾದಿತನದ ಪ್ರಖರವಾದ ಅಗ್ನಿಯಿಂದ ವಿಚಾರಶೂನ್ಯರಾಗಿ, ನಿನ್ನ ಮನಸ್ಸನ್ನು ಹೀಗೆ ವಿಪರೀತವಾದ ಅಹಂಕಾರದ ಮೋಹಕ್ಕೆ ಬೀಳಗೊಡಬೇಡ.

**ದುರ್ಯೋ** :— ಆಚಾರ್ಯರೆ ! ನನ್ನ ಅನ್ನದಿಂದ ಪೋಷಿತವಾದ ಜೀವವು ತನ್ನ ನಿಯತ್ತನ್ನು ಬಿಟ್ಟು ಬಡಬಡಿಸುವದಕ್ಕೆ ಪ್ರಾರಂಭಿಸಿದರೆ ಅದನ್ನು

ಲಕ್ಷಿಸುವರಾರು? ಸತ್ಯದ, ಧರ್ಮದ ಭಾಷ್ಪಳ ಮಾತುಗಳನ್ನು ಸಾಕುಮಾಡಿರಿ! ಕೌರವೇಶ್ವರನ ವಿಜಯವಾಯಿತು ! ಸತ್ಯ, ಶೌರ್ಯ, ಧರ್ಮ, ನೀತಿ, ಸರ್ವಸ್ವವು ರಾಜನ ಪಕ್ಷವನ್ನೇ ಅವಲಂಬಿಸಿತು ! ಆಚಾರ್ಯರೆ, ಈ ಆನಂದಕ್ಕೆ ನೀವು ಕೂಡಾ ಪಾಲುಗಾರರಾಗಿರುವಿರಿ. ನಿಮ್ಮ ಸ್ವಾಧೀನವಿರುವ ಜಿಹ್ವೆಯು ತಿಂದ ಅನ್ನವನ್ನು ಸ್ಮರಿಸಿ, ನನ್ನ ಜಯ ಜಯಕಾರವನ್ನು ಮಾಡಲೇಬೇಕು.

**ದ್ರೋಣ** :— ಶಕ್ಯವಿಲ್ಲ—ಕಾಲತ್ರಯಕ್ಕೂ ಶಕ್ಯವಿಲ್ಲ. ನನ್ನ ಜಿಹ್ವೆಯು ಕಳಚಿಬಿದ್ದರೂ ಚಿಂತೆಯಿಲ್ಲ, ನಿನ್ನ ಜಯ ಜಯಕಾರವನ್ನು ಮಾಡಲಾರದು. ಶರೀರದಿಂದ ನಾನು ಕೌರವರ ಗುಲಾಮನಿದ್ದರೂ, ಮನಸ್ಸಿನಿಂದ ಖಂಡಿತವಾಗಿಯೂ ಅಲ್ಲ— ಪಾಂಡವರ ಪರಾಕ್ರಮವು—

**ಜಯ** :— ಗೊತ್ತಿದೆ ಪಾಂಡವರ ಪರಾಕ್ರಮವು. ಈ ಕೌರವನ ಕುಟಿಲ ಬುದ್ಧಿಯಿಂದಲೆ ಪಾಂಡವರ ಪರಾಕ್ರಮವು, ಲಾಕ್ಷಾಗೃಹದಲ್ಲಿ ಸುಟ್ಟು ಹೋಗಿತ್ತು; ಮತ್ತು ಬಾಲ್ಯದಲ್ಲಿಯೇ ಅವರನ್ನು ಯಮುನಾನದಿಯ ಮಡುವಿನಲ್ಲಿ ಮುಳುಗಿಸಿ ವಿಜಯಶಾಲಿಯಾಗಿತ್ತು

**ದ್ರೋಣ** :— ಕಪಟ ಬುದ್ಧಿಯಿಂದಲೂ ನಿಸ್ಸಾರವಾದ ಶೌರ್ಯದ ಅಹಂಕಾರದಿಂದಲೂ, ಮನುಷ್ಯನು ಅವಿವೇಕಿಯಾಗುವನು. ಅದು ಹೀಗೆಯೆ ಎಂದು ಕಾಣುತ್ತದೆ !

**ಶಕುನಿ** :— (ಪ್ರವೇಶಿಸಿ) ದುರ್ಯೋಧನ, ದುಃಶಾಸನ, ಜಯದ್ರಥಾ, ಸುಮ್ಮನೆ ಇಲ್ಲಿ ಏಕೆ ನಿಂತಿರುವಿರಿ ? ಗೂಢಚಾರನು ಭಯಂಕರವಾದ ವರ್ತಮಾನ ತಂದಿರುವನು. ನಾಳೆ ಸೂರ್ಯಾಸ್ತದೊಳಗೆ ಜಯದ್ರಥನ ಸಂಹಾರ ಮಾಡುತ್ತೇನೆಂದು ಅರ್ಜುನನು ಘೋರ ಪ್ರತಿಜ್ಞೆಯನ್ನು ಮಾಡಿರುವನಂತೆ !

**ಜಯ** :— ಏನು ನನ್ನ ಸಂಹಾರಕ್ಕೋಸ್ಕರ ಪ್ರತಿಜ್ಞೆ ಮಾಡಿರುವನೆ ? ಇದೇನು ?

**ದ್ರೋಣ** .— ಇದು ಶಕುನಿಮಾವನ ಕುಟಿಲ ಬುದ್ಧಿಯ ವಿಜಯವು. ನಿಮ್ಮ ಯಶದ ಜಯ ಜಯಕಾರವು. ಯಾಕೆ ನಿಮ್ಮ ಜಿಹ್ವೆಯ ಚಪಲತ್ವವು ಮುಗ್ಗರಿಸಿತು ? ಆನಂದದ ಕುಣಿದಾಟವು—ಏಕೆ ತಣ್ಣಗಾಯಿತು ? ಜಯದ್ರಥಾ, ಶಕುನಿಯ ಕಪಟ ಕಾರಸ್ಥಾನವು ಕೊನೆಗೆ ನಿನ್ನನ್ನೆ ಪ್ರಾಣ ಸಂಕಟಕ್ಕೆ ಗುರಿಮಾಡಿತೆ ? ಮಾವಾ, ಒಳ್ಳೇ ಅಭಿಪ್ರಾಯವನ್ನು ಕೊಟ್ಟು

ಇಂತಹ ರಾಜಪುತ್ರರನ್ನು ಅಟ್ಟಕ್ಕೇರಿಸಿ, ಅವರನ್ನು ಮೃತ್ಯುದೇವತೆಗೆ ಬಲಿ ಕೊಟ್ಟು ನೀನು ಮಾತ್ರ—ಊರು ಸುಟ್ಟರೂ ಹನುಮಪ್ಪ ಹೊರಗೆ—

**ಶಕುನಿ** :-- ಆಚಾರ್ಯರೇ, ಸುಮ್ಮನೆ ಮಾತು ಬೆಳಿಸಬೇಡಿರಿ ಅರ್ಜುನನು ಪ್ರತಿಜ್ಞೆಮಾಡಿದನೆಂದು ಕೌರವರ ಶೌರ್ಯಕ್ಕೆ ಬಡತನ ಬಂದಿಲ್ಲ. ಇಂದಿನವರೆಗೆ ಈ ಶಕುನಿಯ ಚಾಣಾಕ್ಷಬುದ್ಧಿಯೇ ಕೌರವರಿಗೆ ಸಹಾಯ ಮಾಡಿರುವದು. ನಿಮ್ಮ ಸೇನಾಪತಿ ಶೌರ್ಯವು ಏನು ಶತಕೃತ್ಯಮಾಡಿರುವದು?

**ದುರ್ಯೋ** :—ಜಯದ್ರಥಾ, ನೀನು ಭಯವಡಬೇಡ. ಸೂರ್ಯಾಸ್ತದೊಳಗಾಗಿಯೇ ಅರ್ಜುನನು ತನ್ನ ಪ್ರತಿಜ್ಞೆಯನ್ನು ಹೇಗೆ ಪೂರ್ಣಗೊಳಿಸುವನೊ—ಅದನ್ನು—ನಾನು ನೋಡುತ್ತೇನೆ ನಾನು ಸಾಮ್ರಾಟನು-ನನ್ನ ರಾಜ್ಯದಲ್ಲಿ ಅಸ್ತಂಗತನಾಗುವದು ಸೂರ್ಯನದೇನು ಪ್ರಾಜ್ಞೆಯು ? ನಾನು ಬಯಸಿದ್ದೇ ಹಗಲು ! ನಾನು ಬಯಸಿದ್ದೇ ರಾತ್ರಿಯು. !

**ದ್ರೋಣ** :— ಆದರೆ ನಾಳೆ ಸಾಯಂಕಾಲಕ್ಕೆ ಸೂರ್ಯನೂ ಮುಳುಗಿ ಅರ್ಜುನನು ತನ್ನ ಪ್ರತಿಜ್ಞೆಯನ್ನು ನಿಜವಾಗಿಯೂ ಪೂರ್ಣಗೊಳಿಸಿದರೆ— ಆಮೇಲೆ ನೀನು ರಾತ್ರಿಯನ್ನು ಹಗಲು ಮಾಡಿದರೂ ಕೂಡ ಆ ಎಲ್ಲ ಪ್ರಯತ್ನವು ನಿಷ್ಫಲವಿದೆ.

**ದುರ್ಯೋ** :-- ಸಾಯಂಕಾಲಕ್ಕೆ ಸೂರ್ಯನು ಮುಳುಗಬಹುದು; ಆದರೆ ಸೃಷ್ಟಿಯ ಸಾಮ್ರಾಜ್ಯದಲ್ಲಿ ಮುಳುಗಬಹುದು;—

**ಶಕುನಿ** :— ಆದರೆ ಈ ದುರ್ಯೋಧನನ ಸಾಮ್ರಾಜ್ಯದಲ್ಲಿ ಸೂರ್ಯನು ಮಧ್ಯರಾತ್ರಿಗೆ ಉದಯವಾಗಬೇಕು. ಮತ್ತು ತನ್ನ ಎಂಟು ಪ್ರಹರದ ಪ್ರವಾಸವನ್ನು ಮುಗಿಸಿ—ಪುನಃ ಮಧ್ಯರಾತ್ರಿಗೆ ಅಸ್ತಂಗತನಾಗಬೇಕು. ಪಂಚಮಹಾಭೂತಗಳ ಮೇಲೆ'ಕೂಡಾ, ಸಾಮ್ರಾಟನು ಪ್ರಭುತ್ವವನ್ನು ನಡೆಸಬೇಕು !

**ದುಃಶ್ಯಾ** :— ಭರತಖಂಡದ ಈ ಸಾಮ್ರಾಟನು, ಸೂರ್ಯನ ಉದಯಾಸ್ತಗಳ ಮೇಲೆ ತನ್ನ ಹಗಲು ರಾತ್ರಿಗಳನ್ನು ನಿರ್ಣಯಿಸತಕ್ಕವನಲ್ಲ.

**ದುರ್ಯೋ** :— ಜಯದ್ರಥಾ, ನಡೆ, ಎಲ್ಲವೂ ನನ್ನ ಸಾಮ್ರಾಜ್ಯವಿದೆ. ರಾಜ್ಯದ ವಿಶಾಲವಾದ ಉದರದಲ್ಲಿ ಎಲ್ಲಿಯಾದರೂ ಅಡಿಗಿಸಿಟ್ಟು ನಿನ್ನನ್ನು ರಕ್ಷಿಸುತ್ತೇನೆ.

(ಆಚಾರ್ಯರನ್ನುಳಿದು ಎಲ್ಲರೂ ಹೋಗುವರು)

**ದ್ರೋಣ** :— ಅಹಹಾ ! ಏನಿದು ಸಾಮ್ರಾಟ ಸತ್ತ್ರಿಯ ಮದಾಂಧ ತನವು !.. ...

ರಾಗ ಶಂಕರಾ, ತಾಳ ತ್ರಿವಟ

ಅವಿವೇಕೀ ಸಾಮ್ರಾಟ ರಾಜಾ ।
ಭುವನಭಾರಿ ಬಹುಪಾಪಿ ಮದಾಂಧಾ ॥ ಪಲ್ಲ ॥
ನೀತಿಧರ್ಮವಾ ಘಾತಿಸಿ ಘೋರಾ ।
ಪಾತಕಿಯಾಗುವೆ ! ನೀಚದುರಾತ್ಮಾ ॥ ೧ ॥

(ನೋಡಿ) ಹೌದು ಆದರೆ ಇವಳು — ಕಾರುಣ್ಯದ ದೇವತೆಯು. ಪವಿತ್ರತೆಯ ಪುತ್ಥಳಿಯು; ಎದೆ, ಎದೆ ಹೊಡಿದುಕೊಳ್ಳುತ್ತ ಸಮರ ಭೂಮಿಯಲ್ಲಿ ಸುತ್ತುತ್ತಿರುವಳು. (ಭೀತಿಯ ಆವಿರ್ಭಾವದಿಂದ) ಇವಳು ಉತ್ತರೆಯು ! ಉತ್ತರೆಯು ! ಎಲೈ ದುರ್ದೈವಿ ದ್ರೋಣನೇ–ಇವಳು ಅಭಿಮನ್ಯುವಿನ ಸತಿಯಾದ ಉತ್ತರೆಯಲ್ಲ ! ನಿನ್ನನ್ನು ಶಾಪಕೊಟ್ಟು ದಹಿಸಿಬಿಡುವಂತಹ ಜೀವಂತಶಕ್ತಿಯೆ ನಿನಗೆ ಎದುರಾಗಿ ಬರುತ್ತಿರುವದು ! ಜಾಣತನದ ಶಬ್ದಗಳಿಂದ ಇವಳ ಮನಸ್ಸನ್ನು ಸಮಾಧಾನಗೊಳಿಸುವದಕ್ಕೆ, ಈ ದ್ರೋಣನ ವಾಣಿಯಲ್ಲಿ ತೇಜವಾದರೂ ಎಲ್ಲಿ ಉಳಿದಿರುವದು ! ಗುಲಾಮಗಿರಿಯ ಕಶ್ಮಲದಿಂದ ಈ ಶರೀರವು ದೂಷಿತವಾದಮೇಲೆ, ಆತ್ಮಸಾಮರ್ಥ್ಯವು ಹೇಗೆ ಜೀವಂತವಿದ್ದೀತು ! ( ಹೋಗುವನು, ಪರದೆಯು ಏಳುವದು. ಉತ್ತರೆಯು ಅಭಿಮನ್ಯುವಿನ ಹೆಣದ ಮೇಲೆ ಹೊರಳಾಡುತ್ತಿರುವಳು.)

**ಉತ್ತರಾ** :— ನಾಥಾ ! ಪ್ರಾಣೇಶ್ವರಾ ! ಈ ದುರ್ಭಾಗ್ಯಳನ್ನು ವೈಧವ್ಯದ ವಡಬಾಗ್ನಿಯಲ್ಲಿ ನೂಕಿ, ನೀವು ಹೇಗೆ ಪರಲೋಕಕ್ಕೆ ಹೋದಿರಿ ! ಹೇಳಿರಿ ! ಮಾತಾಡಿರಿ !

**ದ್ರೋಣ** :— (ಬರುವನು) ದುರ್ದೈವೀ ಬಾಲೆಯೇ !

**ಉತ್ತರಾ** :— ಯಾರು–ಯಾರು--ನೀನು-ಯಮದೂತನೋ--ದೇವದೂತನೋ ?

**ದ್ರೋಣ** :— (ಸ್ವಗತ) ಇವಳ ಪವಿತ್ರವಾದ ತೇಜವನ್ನು ನೋಡುವದಕ್ಕೆ, ಈ ದ್ರೋಣನ ಬಲಹೀನವಾದ ನೋಟವು ಭಯಪಡುತ್ತಿರುವದು.

**ಉತ್ತರಾ** :— ಯಾಕೆ ಮಾತಾಡುವದಿಲ್ಲ ? ನಾಲಿಗೆಯು ಯಾತರಿಂದ ಕುಗ್ಗಿತು ?

**ದ್ರೋಣ** :— (ಸ್ವಗತ) ಕೌರವರ ಪಾಪೀ ಅನ್ನದಿಂದ !—

**ಉತ್ತರಾ** :— ಯಾಕೆ ! ಈ ಚಿಕ್ಕ ಬಾಲೆಯ ಮಾತುಗಳು ಕೇಳಿಸ ಲಿಲ್ಲವೆ ? ಅಂತಃಕರಣವು ಸುಟ್ಟುಹೋಯಿತೇ ?

**ದ್ರೋಣ** :— ನಿಶ್ಚಯ ! ಅನ್ನದಾತೃವಿನ ಅನ್ನದ ಭಾರದಿಂದ ಅದು ನಿರ್ಜೀವವಾಗಿದೆ !

**ಉತ್ತರಾ** :— ಮಾತಾಡು—ಮಾತಾಡು, ಯಾರು ನೀನು ? ನನ್ನ ಪಂಚಪ್ರಾಣಗಳು ನನ್ನ ಪ್ರಾಣೇಶ್ವರನ ಪ್ರಾಣವನ್ನು ರಕ್ಷಣೆ ಮಾಡುತ್ತಿರಲು, ಇಂತಹ ಅಕಾಲದಲ್ಲಿಯೇ ಬರುವಂತಹ ದುಷ್ಟಧೈರ್ಯವನ್ನು ಮಾಡಿದಂಥ ದುರಾತ್ಮನೇ, ಯಾರು ನೀನು !

**ದ್ರೋಣ** :— ನಿನ್ನ ಪಂಚಪ್ರಾಣಗಳಿಗೆ ಕೊಳ್ಳಿಹಚ್ಚಿ, ನಿನ್ನ ಪ್ರಾಣೇ ಶ್ವರನ ಪ್ರಾಣದ ಮೇಲೆ ವಿಶ್ವಾಸಘಾತದ ಪಾಶವನ್ನು ಪಸರಿಸಿದಂತಹ ದುರಾ ತ್ಮನು, ಪಾಪಿಯು, ನಾನೇ, ಅವನು ! (ಸ್ವಗತ) ಈ ದ್ರೋಣನ ನಿರ್ಜೀವ ಕಠೋರವಾದ ಮನಸೃಷ್ಟಿಯಲ್ಲಿ ಕುಸುಮಗಳು ಕಲ್ಲಾಗಿ ಹೋದವು ! ತೇಜಸ್ವಿ ರತ್ನಗಳು ಸುಟ್ಟು ಇದ್ದಲಿಯಾದವು !

**ಉತ್ತರಾ** :— ಪಾತಕಿಯೇ ನನ್ನ ಪತಿದೇವನ ಪ್ರಾಣದ ಮೇಲೆ ಕುಹಕತನದಿಂದ ಮೋಸಮಾಡಿದ ವಿಶ್ವಾಸಘಾತಕಿಯೇ—ನೀನು—ನೀನು !

**ದ್ರೋಣ** :— (ಸ್ವಗತ) ನಿಶ್ಚಯ. ಈ ದ್ರೋಣನು ದುರಾತ್ಮನು— ವಿಶ್ವಾಸ ಘಾತಕಿಯು. ಕೊಲೆಪಾತಕಿಯು !

**ಉತ್ತರಾ** :— ಮಾತಾಡು ! ಮಾತಾಡು ! ಈ ಉತ್ತರೆಯು ಯಾವ ಜನ್ಮದಲ್ಲಿ ನಿನಗೆ, ಘೋರ ಅಪರಾಧ ಮಾಡಿದ್ದಳೆಂದು, ನಿನ್ನ ದುಷ್ಟವೈರತ್ವ ವನ್ನು ಸಾಧಿಸಿಕೊಂಡೆ ! (ತಲೆ ಬಡಿದುಕೊಂಡು) ನನ್ನ ಸೌಭಾಗ್ಯವನ್ನು, ಸಂಸಾರಸೌಖ್ಯವನ್ನು, ಕಾಲಿನಿಂದ ತುಳಿದು, ಹೊಟ್ಟೆಯಲ್ಲಿ ಉರಿಯನ್ನು ಹಾಕಿದೆ ! ಮಾತಾಡು, ಕಾಲಕೇತುವೆ ಮಾತಾಡು ! ನನ್ನ ಸಂಸಾರ ಸೌಖ್ಯದ ಸೂರ್ಯನು ಇನ್ನೂ ಉದಯವಾಗುವ ಪೂರ್ವದಲ್ಲಿಯೇ, ಹೊಂಚು ಹಾಕಿ, ಅಕಾಲದಲ್ಲಿಯೇ ಹೇಗೆ ಅವನನ್ನು ಗ್ರಾಸಿಸಿದೆ ! ಪ್ರೀತಿಯ ದಂಪತಿಗಳ ಜೀವಿತ ಸರ್ವಸ್ವವನ್ನು ಹಾಳುಮಾಡಿ, ನೀನು-ಜೀವಂತವಾಗಿರುವೆಯಾ ! ಕೇಳು ದುರಾತ್ಮಾ, ಶೋಕದಿಂದ ತಪ್ತವಾದ ಅಂತಃಕರಣದಿಂದ ನಾನು ನಿನಗೆ ಕೊಡುವ ಶಾಪವನ್ನು ಚೆನ್ನಾಗಿ ಕೇಳು !

**ದ್ರೋಣ** :— ( ಸದ್ಗದಿತ ಕಂಠದಿಂದ) ಶಾಂತಳಾಗು—ಹೇ ಪುಣ್ಯ ದೇವತೆಯೇ ಶಾಂತಳಾಗು. ನನ್ನ ಸರ್ವ ತಪಶ್ಚರ್ಯವ ಮತ್ತು ಅನಂತ ಜನ್ಮಗಳ ಪುಣ್ಯವನ್ನು ನಾನು ನಿನ್ನ ಚರಣಕ್ಕೆ ಅರ್ಪಿಸುವೆನು. ಆದರೆ ದೇವತೆಯೇ ಶಾಪವನ್ನು ಕೊಡಬೇಡ ! ನನ್ನ ಪರಾಕ್ರಮದ ಅಹಂಕಾರವು ಬ್ರಹ್ಮಚರ್ಯದ ಪ್ರತಿಷ್ಠೆಯು, ನಿನ್ನ ಪವಿತ್ರ ಶೀಲ ತೇಜದ ಮುಂದೆ ತಲೆ ಬಾಗಿಸಿತು, ಕೊಡಬೇಡಾ ! ಶಾಪವನ್ನು ಕೊಡಬೇಡಾ ! ಶಾಂತಳಾಗು ! ಅಖಿಲ ಬ್ರಹ್ಮಾಂಡವನ್ನೇ ತಲ್ಲಣಿಸುವಂಥ ಪರಾಕ್ರಮವು ಈ ಕೈಯಲ್ಲಿದೆ ! ತಪಸ್ಸಿನ ದಿವ್ಯ ಶಕ್ತಿಯಿಂದ ಅನಂತ ವಿಶ್ವಗಳನ್ನು ಒಂದೇ ಕಟಾಕ್ಷದಿಂದ ದಹಿಸಿಬಿಡುವಂತಹ ಸಾಮರ್ಥ್ಯವು ಈ ಕಣ್ಣುಗಳಲ್ಲಿದೆ ! ಬೇಕಾದಂತಹ ದೈವೀಶಕ್ತಿಯನ್ನು ಕೂಡಾ ನಾನು ಲಕ್ಷಿಸಲಿಲ್ಲ. ಆದರೆ ದೇವತೆಯೇ, ನಿನ್ನ ಶಾಪಕ್ಕೆ, ದಿವ್ಯ ಶಕ್ತಿಯುಳ್ಳ ಒಬ್ಬ ಸತಿಯ ಶಾಪಕ್ಕೆ ಭಯಪಟ್ಟಿರುವೆನು ! ಶಾಂತಳಾಗು ! ಶಾಂತಳಾಗು !

**ಉತ್ತರಾ** — ಶಾಂತವಾಗಲಿ ಹೇಗೆ ಶಾಂತವಾಗಲಿ !ನನ್ನ ಸೌಭಾಗ್ಯ ಮಂದಿರಕ್ಕೆ ಕೊಳ್ಳಿಹಚ್ಚುವುದಕ್ಕೆ ನೀನೇ ಕಾರಣೀಭೂತನಾಗಿರುವೆ ! ರಾಕ್ಷಸಾ ನನ್ನ ಸೌಭಾಗ್ಯಸೂರ್ಯನನ್ನು ನುಂಗಿ ನನ್ನನ್ನು ವೈಧವ್ಯದ ಕತ್ತಲೆಯಲ್ಲಿ ನೂಕಿದೆ ! ಕೇಳು ನನ್ನ ಶಾಪವನ್ನು

**ದ್ರೋಣ** :— ತಾಳು, ಉತ್ತರೆ ತಾಳು. ಈ ದುರಾತ್ಮನು ನಿಜವಾಗಿಯೂ ಶಾಪಕ್ಕೆ ದೊರೆಯಾಗಿರುವನು; ಆದರೆ ಪಾಪಕ್ಕೆ ಮಾತ್ರ ಖಂಡಿತವಾಗಿಯೂ ಅಲ್ಲ! ಕೌರವರ ಕಪಟ ಬುದ್ಧಿಗೆ ನನ್ನ ಸರ್ವಸ್ವವನ್ನು ಅರ್ಪಿಸಿದ್ದರಿಂದಲೇ—

**ಉತ್ತರಾ** :— ಕೌರವರ ಕಪಟ ಬುದ್ಧಿಗೆ ನೀನು ಆಳಾದೆಯಲ್ಲವೆ ? ಕೌರವರ ಅನ್ನವನ್ನು ಸೇವಿಸಿದ್ದರಿಂದ, ಧರ್ಮವನ್ನು ಮರೆತು ಇಂಥ ಅಧರ್ಮವನ್ನು ಮಾಡಿದೆಯಲ್ಲವೇ ? ಅಂದಮೇಲೆ ನೀನೂ ಕೌರವರೂ ಪಾಪಿಗಳು ! ಶಾಪಕ್ಕೆ ಪಾತ್ರರು ! ಕೇಳು ನನ್ನ ಶಾಪವನ್ನು ! ಕೌರವನ ಕುಲವು ಸಮೂಲ ನಾಶವಾಗುವುದು, ಇಂತಹ ಕಪಟ ಬುದ್ಧಿಯ ಪಿಶಾಚಿಗಳ ಸೇವಕನಾಗಿರುವ ನಿನಗೆ ಕೊನೆಗೆ ಕಪಟತನದಿಂದ ಘೋರ ಮರಣವು ಬರುವುದು ! ಪತಿವ್ರತೆಯ ಪ್ರೀತಿಯ ಸಂಸಾರವನ್ನು ಹಾಳುಮಾಡಿದಂಥ ಪಾಪೀ ರಾಜರ ಸಿಂಹಾಸನವು

ಮಣ್ಣುಪಾಲಾಗುವುದೇ ಖಂಡಿತವು. ಕೇಳಿದೆಯಾ ನನ್ನ ಶಾಪವನ್ನು! ನಡೆ ಹೊರಟು ಹೋಗು ! (ಹೋಗಹತ್ತುವಳು)

**ದ್ರೋಣ** :— ಉತ್ತರೆಯೇ ' ದೇವತೆಯೇ, ಈ ದ್ರೋಣನಿಗೆ ಎಂತಹ ಭಯಂಕರ ಶಾಪಕೊಟ್ಟೆ ! (ಹಣೆ ಬಡಿದುಕೊಳ್ಳುವನು)

**ಉತ್ತರಾ** :— ಯಾರು ? ಯಾರು ತಾವು ? ದ್ರೋಣಾಚಾರ್ಯರೇ ! (ಎಚ್ಚರಿಕೆ ಯಾಗುವಳು)

**ದ್ರೋಣ** :— ಹೌದು ನಿನ್ನ ಶಾಪಕ್ಕೆ ಪಾತ್ರನಾದವನು ನಾನೆ ! ಮಹಾಪಾತಕಿಯಾದ ದ್ರೋಣನು

**ಉತ್ತರಾ** :— (ಕಾಲುಹಿಡಿದು) ಕ್ಷಮಿಸಿರಿ ! ಆಚಾರ್ಯರೆ ಕ್ಷಮಿಸಿರಿ. ಭ್ರಮಿಷ್ಠೆಯಾದ ಹುಡುಗೆಯ ಅಪರಾಧವನ್ನು ಕ್ಷಮಿಸಿರಿ ಶೋಕದಿಂದ ಎಚ್ಚರವಿಲ್ಲದಾಯಿತು, ಹೊಟ್ಟೆ ಉರಿಯಿತು. ಸೌಭಾಗ್ಯಕ್ಕೆ ಸಿಡಿಲು ಬಡಿ ಯಿತು. ಆಚಾರ್ಯರೇ ! ಶೋಕಸಾಗರದಲ್ಲಿ ಮುಳುಗಿದಂಥ ಈ ಉತ್ತರೆಯ ಅಪರಾಧವನ್ನು ಕೃಪಾದೃಷ್ಟಿಯಿಂದ ನೋಡಿರಿ ! (ಅಳುವಳು)

**ದ್ರೋಣ** :— ಉತ್ತರೆ ಏಳು. ನಾನೇ ನಿನ್ನಪಾದಕ್ಕೆ ಎರಗಿ ಕ್ಷಮೆ ಯನ್ನು ಬೇಡಬೇಕು, ಅಷ್ಟು ನಿನ್ನ ಯೋಗ್ಯತೆಯು ದೊಡ್ಡದಿದೆ. ಶಾಪವನ್ನು ನೀನು ಕೊಡಲಿಲ್ಲ, ಆದರೆ ನಿನ್ನ ಹೃದಯದಲ್ಲಿಯ ನ್ಯಾಯ ಪಕ್ಷಪಾತಿಯಾದ ಪರಮಾತ್ಮನ ಶಕ್ತಿಯೇ ಶಾಪವನ್ನು ಕೊಟ್ಟಿತು ! ಉತ್ತರೆ, ನಿನ್ನದೇನೂ ದೋಷವಿಲ್ಲ ! ನನ್ನದೇ ದೋಷವು.

(ಒಳಗೆ:— ಬಾಲೆ, ಉತ್ತರೆ ಎಲ್ಲಿರುವೆ)

**ಉತ್ತರಾ** :— ಯಾರದು ! ಅತ್ತೆಯವರೇ ಬಂದರು.

**ದ್ರೋಣ** :— ಯಾರು ಸುಭದ್ರಾದೇವಿಯೆ ? ವಾತ್ಸಲ್ಯದ ಗಂಗೆಯೇ ಬಂದಳು ಹೊ ದ್ರೋಣನೆ–ನಿನ್ನ ಕಾಲಿಗೆ ಬುದ್ಧಿ ಹೇಳು. ಯಾವ ಸ್ಥಳದಲ್ಲಿ ಉತ್ತರೆ ಸುಭದ್ರೆಯರಂತಹ ಪುಣ್ಯದೇವತೆಯರು ಸಂಚರಿಸುತ್ತಿರುವರೊ ಅಲ್ಲಿ ನಿನ್ನ ಪಾಪೀ ಕಠೋರ ಅಂತಃಕರಣದ ನೆರಳು ಬೀಳಗೊಡಬೇಡ. ನಡೆ ಹೊರಡು ! (ಹೋಗುವನು)

**ಸುಭದ್ರಾ** :— ಉತ್ತರೆ, ದೀನಬಾಲೆ, ಇಲ್ಲಿ ಒಬ್ಬಳೆ ಏನು ಮಾಡುವಿ ಯಮ್ಮಾ ?

**ಉತ್ತರಾ** — ನನ್ನ ಪ್ರಾಣಕಾಂತನ ಪ್ರಾಣಕ್ಕೆ, ನನ್ನ ಜೀವದ ಜೋಡು ಮಾಡುತ್ತೇನೆ !

**ಸುಭದ್ರಾ** :— ಯಾರು, ಯಾರು ! ನನ್ನ ಮುದ್ದು ಕುಮಾರನೇ, ನನ್ನ ಪ್ರಾಣವೇ. ಏಳು ಏಳು, ಮಗುವೆ ಈ ನಿನ್ನ ಪ್ರೀತಿಯ ತಾಯಿಯ ಆಕ್ರೋಶವು ನಿನಗೆ ಕೇಳಿಸುವುದಿಲ್ಲವೆ ? ಈ ಆಕ್ರೋಶದಿಂದ ಯಾವತ್ತು ಬ್ರಹ್ಮಾಂಡವೆ ಎಚ್ಚತ್ತಿತು ! ನೀನು ಎಚ್ಚರಾಗಲಾರಿಯಾ ? ಮಗು ನಿನ್ನ ದೀರ್ಘ ನಿದ್ರೆಯು ಇನ್ನೂ ಪೂರೈಸಲಿಲ್ಲವೆ ? ಒಮ್ಮೆ ನಿನ್ನ ನೇತ್ರ ಕಮಲ ಗಳನ್ನು ತೆರೆದು ನಿನ್ನ ತಾಯಿಯನ್ನು ನೋಡುವುದಿಲ್ಲವೆ, ಅಭಿಮನ್ಯು—

( ಶ್ರೀಕೃಷ್ಣನ ಪ್ರವೇಶ )

**ಶ್ರೀಕೃಷ್ಣ** :— ಹುಚ್ಚೀ ಸುಭದ್ರೆ, ನೀನಿದನ್ನೇನು ಮಾಡುವೆ ? ಉತ್ತ ರೆಗೆ ಧೈರ್ಯ ಹೇಳುವುದನ್ನು ಬಿಟ್ಟು–( ಅರ್ಜುನ ಮೊದಲಾದವರು ಬರುವರು.)

**ಸುಭದ್ರಾ** :— ಕೃಷ್ಣಾ, ಕೃಷ್ಣಾ, ಇದೋ ನೋಡು ನನ್ನ ಆಶೆಯ ಆನಂದದ ಚಂದ್ರನು ದಿಕ್ಕಿಲ್ಲದೆ ಹೇಗೆ ಬಿದ್ದಿರುವನು ? ನನ್ನ ಮುದ್ದಿನ ಅರ ಗಿಣಿಯನ್ನು ಕಾಲನು ಸೆಳೆದುಕೊಂಡು ಹೋದನು ! ನನ್ನ ಮುದ್ದು ಕುಮಾ ರನು ಅರಮನೆಯಿಂದ ಹೊರಗೆ ಕಾಲಿಟ್ಟವನಲ್ಲ; ಅಂಥವನು ಈ ದಿವಸ—ಈ ರಣಾಂಗಣದಲ್ಲಿ– ಹೇಗೆ ದೀನನಾಗಿ ಬಿದ್ದಿರುವನು ! ಸಮರದ ಪ್ರಥಮೋತ್ಸಾಹ ವನ್ನು ಪೂರೈಸುವದಕ್ಕೋಸ್ಕರ ನನ್ನ ಪ್ರಿಯ ಕುಮಾರನು, ತನ್ನ ಆಯುಷ್ಯದ ಪೂರ್ಣಾಹುತಿಯನ್ನು ಸಮರ್ಪಿಸಿದನು. ಅಯ್ಯೋ ದೇವರೆ—ದೇವರೆ (ಮೂರ್ಛೆಯಾಗುವಳು)

**ಉತ್ತರಾ** :— ಅತ್ತೆಯವರೆ, ಅತ್ತೆಯವರೆ (ಅವಳೂ ಬೀಳುವಳು)



## ಐದನೆಯ ಪ್ರಸಂಗ

( ಮೇಘನಾದನು ರೋಷದಿಂದ ಪ್ರವೇಶಿಸುತ್ತಾನೆ )

**ಮೇಘ** :— ಅಪಮಾನವು ! ಈ ಮೇಘನಾದನ ಅಪಮಾನವು ! ಅದೂ ಹೆಂಡತಿಯಿಂದ ಅಪಮಾನವು ! ಅದರಲ್ಲಿಯೂ ಲಗ್ನದ ಹೆಂಡತಿಯಿಂದ! ಇದೇನು ಸಾಮಾನ್ಯ ಅಪಮಾನವೇ ! ಪುರುಷರು ಈ ಹೆಂಗಸರ ಒದೆತಗಳನ್ನು

ತಿನ್ನುವದಕ್ಕೇ ಭೂಮಿಯಲ್ಲಿ ಜನ್ಮಿಸಿರುವರೇ ಹೇಗೆ ? ಅಲ್ಲ. ಖಂಡಿತ ವಾಗಿಯೂ ಅಲ್ಲ ! ವೀರರಾದ ನಾವು ಒದೆತಗಳನ್ನು ತಿನ್ನೋಣ, ಆದರೆ ಹೊರ ಗಿನ ಹೆಂಗಸರಿಂದ ತಿನ್ನೋಣ! ಲಗ್ನದ ಹೆಂಡತಿಯಿಂದ ಒದೆತಗಳನ್ನು ತಿನ್ನುವ ದೆಂದರೆ ಸಾಮಾನ್ಯ ವಿಷಯವಾಯಿತೆ ? ಪುರುಷವೇಷದಿಂದ ಅವಳು ನನ್ನ ದುರ್ದೆಶೆಯನ್ನು ಪೂರಾಮಾಡಿದಳು. ಹೀಗೆಯೇ ಹೋಗಿ ಅವಳ ಕುತ್ತಿಗೆ ಯನ್ನು ಹಿಚುಕಿ ಪ್ರಾಣ ತಕ್ಕೊಳ್ಳಲೆ, ಅಥವಾ ನನ್ನ ಕುತ್ತಿಗೆಯನ್ನೇ ಹಿಚುಕಿ ಕೊಂಡು ಪ್ರಾಣ ಬಿಡಲೆ ? ಬೇಡ ! ನಾನು ಪುರುಷನಿರುವೆನು. ಹೆಂಡತಿಯ ಕುತ್ತಿಗೆಯನ್ನು ಹಿಚುಕಿ ಪ್ರಾಣತಕ್ಕೊಳ್ಳುವುದೇ ನನಗೆ ಭೂಷಣವು. ಈ ದಿವಸ ಉತ್ತರಾರಾಣಿಯವರು ಸತಿ ಹೋಗತಕ್ಕವರಿರುವರು. ನಮ್ಮವಳಿಗೂ ಸತಿ ಹೋಗುವದಕ್ಕೆ ಹೇಳುವೆನು. ಗಂಡನು ಜೀವಂತನಿದ್ದಾಗಲೇ ಸತಿ ಹೋಗು ವದೇ ಹೆಂಗಸರಿಗೆ ಪುರುಷಾರ್ಥವು ! ನನ್ನ ಕಣ್ಣೆದುರಿಗೆ ಹೆಂಡತಿಯು ಸತಿ ಹೋಗುವದಿಲ್ಲವೆಂದರೆ ಸಾಮಾನ್ಯ ಮಾತೆ ! ಅವಳದೇನು ಪ್ರಾಜ್ಞೆಯು ! ನಾನು ಅವಳ ಗಂಡನಲ್ಲವೆ ? ಅಪಮಾನವು ಅತ್ಯಂತ ಅಪಮಾನವು. (ಹೋಗುವನು)

( ಪರದೆಯು ಏಳುವದು, ಉತ್ತರೆಯು ಸತಿ ಹೋಗುವ ನೋಟ )

**ಉತ್ತರಾ :—** ಅತ್ತೆಯವರೆ, ನನ್ನ ಪವಿತ್ರ ಇಚ್ಛೆಗೆ ನೀವು ಅಡ್ಡ ಬರಬೇಡಿ. ಪತಿಯು ಹೋದ ಮೇಲೆ ಸತಿಯು ಒಂದು ಕ್ಷಣವಾದರೂ ಜೀವಿ ಸಿರುವದು ಶಕ್ಯವೇ ? ನಾನು ಅವರ ಸಹಚಾರಿಣಿಯೆಂದಮೇಲೆ, ನಾನೂ ಅವರ ಜೊತೆಯಲ್ಲಿಯೇ ಈ ಅಗ್ನಿಶಯ್ಯೆಯ ಮೇಲೆ, ಕೊನೆಯ ನಿದ್ರೆ ಹೋಗು ವದು ಧರ್ಮವಲ್ಲವೇ ? ನಾನು ತಮಗೆ ಸೆರಗೊಡ್ಡಿ ಬೇಡುವೆನು. ನನ್ನನ್ನು ತಡೆಯಬೇಡಿರಿ.

**ಸುಭದ್ರಾ :—** ಬಾಲೆ, ನನ್ನ ಸುಕುಮಾರನು ನನ್ನನ್ನು ಬಿಟ್ಟು ಹೋದನು. ನೀನೂ ಬಿಟ್ಟು ಹೋಗುವೆಯಾ ? ಇನ್ನುಮೇಲೆ ಈ ಸುಭದ್ರೆಯು ಯಾರ ಮುಖವನ್ನು ನೋಡಿ ಸಮಾಧಾನ ಮಾಡಿಕೊಳ್ಳಬೇಕು.

**ಉತ್ತರಾ :—** ಸತಿ ಹೋಗುವ ನನ್ನ ನಿಶ್ಚಯವು ಕದಲಲಾರದು. ಈ ಸೂರ್ಯಚಂದ್ರರು ಕದಲಬಹುದು—ಆದರೆ ನನ್ನನಿಶ್ಚಯವು ಕದಲಲಾರದು. ಸುವಾಸಿನಿಯರೆ, ಸಹಗಮನದ ಸೌಭಾಗ್ಯ ಮಂಗಲವಿಧಾನವನ್ನು ಬೇಗನೆ ಪೂರೈಸಿರಿ. [ ಯಾವತ್ತರಿಗೂ ನಮಸ್ಕರಿಸಿ ಚಿತೆಗೆ ಪ್ರದಕ್ಷಿಣೆ ಹಾಕುವಳು ] ಅತ್ತೆ

ಯುವತಿ, ಬರುವೆನು ಭಾವನವರೇ ಬರುವೆನು. ಇಂದಿನವರೆಗೆ ಈ ಚಿಕ್ಕ ಬಾಲೆಯಿಂದ ತಿಳಿಯದೆ ಏನೇ ಅಪರಾಧವಾಗಿದ್ದರೆ ಕ್ಷಮಿಸಿರಿ. ನಾನು ಬರುವೆನು

**ಶ್ರೀಕೃಷ್ಣ** :— (ಪ್ರವೇಶಿಸಿ) ತಾಳು. ತಾಳು ಉತ್ತರೆಯೇ ತಾಳು ತಾಳು ! ನಿನಗೆ ಸತಿ ಹೋಗುವದಕ್ಕೆ ಅಧಿಕಾರವಿಲ್ಲ. ತಿರುಗು ಹಿಂದಕ್ಕೆ !

**ಉತ್ತರಾ** :— ಏನು ಈ ದುರ್ದೈವೀ ಉತ್ತರೆಗೆ ಸತಿ ಹೋಗುವದಕ್ಕೆ ಕೂಡ ಅಧಿಕಾರವಿಲ್ಲವೆ ? ಪತಿಯು ಹೋದಮೇಲೆ ಉಳಿದ ಆಯುಷ್ಯವನ್ನು ವೈಧವ್ಯದ ಕಠೋರ ಶಿಕ್ಷೆಯಲ್ಲಿಯೇ ಕಳೆಯಬೇಕೆ ? ಬ್ರಹ್ಮನು ಹಾಗೆಯೇ ಬರೆದಿರುವನೇ ? ಆಗಲಿ ತಮ್ಮ ಆಜ್ಞೆಯು

**ಶ್ರೀಕೃಷ್ಣ** :— ಇದು ನನ್ನ ಆಜ್ಞೆಯಲ್ಲ. ಧರ್ಮಾಜ್ಞೆಯೇ ಹಾಗಿರುವದು, ನೀನು ಗರ್ಭವತಿ. ಗರ್ಭವತಿಗೆ ಸಹಗಮನ ಮಾಡುವದಕ್ಕೆ ಧರ್ಮದಿಂದ ಅಧಿಕಾರವಿಲ್ಲ.

**ಉತ್ತರಾ** :— ಈ ಉತ್ತರೆಯು ಧರ್ಮದ ಆಜ್ಞೆಯನ್ನು ಮನ್ನಿಸುವದಿಲ್ಲ ! ಸತಿಗೆ ಪತಿಯೇ ದೇವರು, ಧರ್ಮವು !

**ಶ್ರೀಕೃಷ್ಣ** :— ಹಾಗಾದರೆ ಪತಿಪರಮೇಶ್ವರನ ಆಜ್ಞೆಯನ್ನಾದರೂ ಮನ್ನಿಸುವೆಯಲ್ಲವೇ ?

**ಉತ್ತರಾ** :— ಪತಿಯಾಜ್ಞೆಯನ್ನು ಪಾಲಿಸಿದವಳು ಸತಿಯೇ ? ಈ ಉತ್ತರೆಯು ಅಖಂಡವಾದ ಪತಿಸೇವೆಗೋಸ್ಕರವೇ ಸ್ವರ್ಗಕ್ಕೆ ನಡೆದಿರುವಳು.

**ಶ್ರೀಕೃಷ್ಣ** :— ಹಾಗಾದರೆ ಮೊದಲು ಈ ಅಶರೀರವಾಣಿಯನ್ನು ಕೇಳು. ( ಆಕಾಶವಾಣಿ :— ಉತ್ತರೆ ನೀನು ಸತಿಹೋಗಬೇಡ ! ನಿನ್ನ ಹೊಟ್ಟೆಯಲ್ಲಿ ಪರೀಕ್ಷಿತನು ಜನ್ಮಿಸುವನು, ಅವನು ಭರತಖಂಡದ ಸಾಮ್ರಾಟನಾಗುವನು )

**ಉತ್ತರಾ** :— ಯಾರದು ' ಯಾರದೀ ಅಶರೀರವಾಣಿಯು ! !

**ಶ್ರೀಕೃಷ್ಣ** :— ಅನ್ಯರದಾರದು ! ಅಕೋ ನೋಡು. ಸಚ್ಚಿದಾನಂದ ಪರಮಾತ್ಮನ ಮೂರ್ತಿಯ ಸ್ವರೂಪವು ( ಟ್ರಾನ್ಸಫರ–ಚತುರ್ಭುಜ ಪರಮಾತ್ಮನ ದರ್ಶನ ) ಉತ್ತರೆ, ಅದೋ ನೋಡು. ಅಭಿಮನ್ಯುವು ಹೇಗೆ ವೈಕುಂಠಕ್ಕೆ ತೆರಳಿರುವನು. ( ಟ್ರಾನ್ಸಫರ )

———

# ನಾಲ್ಕನೆಯ ಅಂಕ

## ಒಂದನೆಯ ಪ್ರಸಂಗ

( ಸ್ಥಳ :— ಅರಣ್ಯದ ದಾರಿ, ಜಯದ್ರಥನು ಬರುವನು )

**ಜಯ** :— ಹೇ—ಸೂರ್ಯನಾರಾಯಣಾ, ಈ ದಿವಸ ಈಜಯದ್ರಥನಿಗೆ, ಅವನ ಆಯುಷ್ಯದ ಕೊನೆಯ ದಿವಸವನ್ನು ತೋರಿಸುವೆಯಾ! ಸೂರ್ಯಾಸ್ತವಾಗುವ ಪೂರ್ವದಲ್ಲಿ ಜಯದ್ರಥನ ವಧ, ಅದಾಗದಿದ್ದರೆ ಅರ್ಜುನನ ಅಗ್ನಿಪ್ರವೇಶ! ಅರ್ಜುನನ ಈ ಘೋರ ಪ್ರತಿಜ್ಞೆಯನ್ನು ಕೇಳಿದಾಗಿನಿಂದ ಆ ಶಬ್ದಗಳು ನನ್ನ ಕಿವಿಗಳಲ್ಲಿ ಒಂದೇ ಸಮನೆ ಘುಮುಘುಮಿಸುತ್ತಿರುವವು. ಹೇ ಭೂಮಾತೆ, ನೀನಾದರೂ ಸೂರ್ಯಾಸ್ತವಾಗುವ ತನಕ, ಈ ಜಯದ್ರಥನನ್ನು ನಿನ್ನ ವಿಶಾಲವಾದ ಉದರದಲ್ಲಿ ಬಚ್ಚಿಟ್ಟುಕೋ. ಧನುರ್ಧಾರೀ ಪಾರ್ಥನು ತನ್ನ ಪ್ರತಿಜ್ಞೆಯನ್ನು ಪೂರ್ಣಗೊಳಿಸದೇ ಎಂದೂ ಬಿಡಲಾರನು. ಏನು ಮಾಡಲಿ! ಎಲ್ಲಿ ಅಡಗಲಿ! ಏನೂ ತೋಚದಾಗಿದೆ! ಆಕಾಶ ಮಾರ್ಗದಲ್ಲಿ ಸೂರ್ಯನು ಒಂದೊಂದೇ ಹೆಜ್ಜೆಯನ್ನಿಡುತ್ತ ತನ್ನ ಹಾದಿಯನ್ನು ಹೇಗೆ ಸಾಗಿಸುತ್ತಿರುವನೋ ಹಾಗೆ, ಭಯಗ್ರಸ್ತವಾದ ನನ್ನ ಜೀವವು ಹಿಂದೆ ಹಿಂದೆ ಸರಿಯುತ್ತಿರುವದು. ಎಲೈ ಸೂರ್ಯನೇ, ನೀನು ಅಸ್ತಂಗತನಾಗು! ಆದರೆ, ನನಗೋಸ್ಕರವಾಗಿ ಪ್ರವಾಸವನ್ನು ಇಷ್ಟು ಅವಸರದಿಂದ ಮುಗಿಸುವ ಅಗತ್ಯವಾದರೂ ನಿನಗೆ ಏನಿದೆ? ದುರ್ದೈವಿ ಜಯದ್ರಥನೆ—ಇಂದಿಗೆ ನಿನ್ನ ನೂರು ವರ್ಷಗಳು ಮುಗಿದವು! ಸೂರ್ಯಾಸ್ತದೊಳಗಾಗಿ ನಿನಗೆ ಈ ಜಗತ್ತು ಶೂನ್ಯವಾಗುವದು!

( ದುರ್ಯೋಧನ—ಶಕುನಿ, ಮೊದಲಾದವರು ಬರುವರು )

**ದುರ್ಯೋ** :— ಏನು? ಶೂನ್ಯವಾಗುವದೆ? ಜಯದ್ರಥಾ, ಅರ್ಜುನನ ಪ್ರತಿಜ್ಞೆಯ ವಿಷಯವಾಗಿ ನೀನೇಕೆ ಇಷ್ಟು ಭಯಗ್ರಸ್ತನಾಗಿರುವೆ? ನಿನ್ನ ಸಂರಕ್ಷಣೆಗೋಸುಗ ಈ ದುರ್ಯೋಧನನು ನಿನ್ನ ಬೆಂಗಾವಲಿಗೆ ನಡುಕಟ್ಟಿ ಸಿದ್ಧನಾಗಿರುವನು!

**ದುಶ್ಯಾ** :— ಅಲ್ಲದೆ ನಾವು ಕೂಡಾ ಸಿದ್ಧರಿರುವೆವು. ಇಂತಹ ಸಹಸ್ರ ಅರ್ಜುನರು ಬಂದರೂ ನಾವೇನೂ ಭಯಪಡಬೇಕಾಗಿಲ್ಲ.

**ಜಯ** :— ನನ್ನ ಅಂತ್ಯಕಾಲಕ್ಕೆ ಯಾರಿಂದಲೂ ನನಗೆ ಸಹಾಯ ದೊರೆಯುವುದು ಅಶಕ್ಯವೆಂದು ನನ್ನ ಮನಸ್ಸು ಹೇಳುತ್ತಿರುವುದು.

**ಶಕುನಿ** :— ಹುಚ್ಚಾ, ನೀನು ಸುಮ್ಮ ನುಮ್ಮನೆ ಇಷ್ಟೇಕ ಭಯಪಟ್ಟಿರುವೆ ? ಕೌರವರು ಶಸ್ತ್ರವನ್ನು ಬಿಸಾಕಿ, ಕೈಯಲ್ಲಿ ಬಳೆ ಇಟ್ಟಿರುವರೆಂದು ತಿಳಿದಿರುವೆಯಾ ?

**ದುರ್ಯೋ** :— ನಿನ್ನ ಪ್ರಾಣರಕ್ಷಣೆಗೋಸ್ಕರ ನಾವು, ನಮ್ಮ ಪ್ರಾಣಗಳನ್ನು ಸಹ ವೆಚ್ಚಮಾಡುವೆವು ಏತಕ್ಕೆ ಭಯಪಡುವೆ ? ಏನಾದರೊಂದು ಯುಕ್ತಿಯಿಂದ ನಿನ್ನನ್ನು ಬದುಕಿಸಲು ಶಕುನಿಯು ಸಿದ್ಧನಿದ್ದಾನೆ. ಮಾವಾ ! ಏನಾದರೂ ಯುಕ್ತಿಯನ್ನು ತೆಗೆ !

**ಶಕುನಿ** :— ಓಹೋ ಯುಕ್ತಿಗೇನು ಕಡಿಮೆ ! ಈ ಶಕುನಿಯ ಮೇಧಾಶಕ್ತಿಯು ಪ್ರಪಂಚವನ್ನು ಮುಣುಗಿಸುವದು ! ತೇಲಿಸುವದು ! ಒಳ್ಳೇ ಸೊಗಸಾದ ಯುಕ್ತಿಯನ್ನೇ ಹೇಳುವೆನು ಅದರಂತೆ ಮಾತ್ರ ನೀನು ನಡೆಯಬೇಕು. ಅಷ್ಟೆ.

**ಜಯ** :— ಇದು ಪ್ರತ್ಯಕ್ಷ ಪ್ರಾಣರಕ್ಷಣೆಯ ಪ್ರಸಂಗವಿರುವದರಿಂದ ನೀವು ಹೇಳಿದಂತೆ ವರ್ತಿಸುವೆನು.

**ಶಕುನಿ** :— ಕೇಳು ಸೂರ್ಯಾಸ್ತದವರೆಗಷ್ಟೆ ಅಲ್ಲವೆ ಅರ್ಜುನನ ಪ್ರತಿಜ್ಞೆಯು ? ಸರಿ ಹಾಗಾದರೆ ಸೂರ್ಯನು ಮುಳುಗುವವರೆಗೆ, ಎಲ್ಲಿಯಾದರೂ ಒಂದು ಗುಪ್ತವಾದ ಸ್ಥಳದಲ್ಲಿ ಯಾರಿಗೂ ತಿಳಿಯದಂತೆ ಅಡಗಿಕೊ, ಹೂ-ನಡೆ ಈ ಸಮರಭೂಮಿಯಿಂದ ಬೇಗನೆ ಪಲಾಯನ ಹೇಳು.

**ಜಯ** :— ಅಡಗಿಕೊಂಡು ಕೂಡಲೆ, ಸಮರಭೂಮಿಯಿಂದ ಓಡಿ ಹೋಗಲೆ ? ಶಕ್ಯವಿಲ್ಲ. ಮರಣ ಬಂದರೂ ಚಿಂತೆಯಿಲ್ಲ, ಇಂತಹ ಹೇಡಿತನಕ್ಕೆ ಈ ಜಯದ್ರಥನ ಮನಸ್ಸು ಒಪ್ಪಲಾರದು.

**ಶಕುನಿ** :— ನಿಮ್ಮಂಥ ದುರಭಿಮಾನಿಗಳು ಇಂಥಲ್ಲಿಯೇ--ತಪ್ಪುವಿರಿ. ನಿಮಗೆ ಬುದ್ಧಿಯಿಲ್ಲ; ಎರಡನೆಯವರ ಬುದ್ಧಿವಾದವನ್ನೂ ಕೇಳುವ ಹಾಗಿಲ್ಲ. ನಿಮ್ಮಂಥಾ ವಿಚಾರ ಶೂನ್ಯರಮುಂದೆ ನಮ್ಮ ಮತಿಯೇ ಕುಂಠಿತವಾಗುವುದು! ಅದೋ ಆಚಾರ್ಯರೇ ಬಂದರು. ಅವರೇನು ಹೇಳುವರೋ ಕೇಳು.

**ದ್ರೋಣ** :— ವಿಚಾರಿಸು ! ಏನು ವಿಚಾರಿಸುವುದು? ಇನ್ನುಮೇಲೆ ಈ ದ್ರೋಣಾಚಾರ್ಯರನ್ನು --ಜಯದ್ರಥನು ಏನು ವಿಚಾರಿಸುವನು ?

**ದುರ್ಯೋ** :— ಅರ್ಜುನನ ಪ್ರತಿಜ್ಞೆಯ ವಿಷಯ–ಆಚಾರ್ಯರಿಗೆ ತಿಳಿದೇ ಇದೆ. ಆ ವಿಷಯವಾಗಿ........ ...

**ದ್ರೋಣ** :— ಆ ವಿಷಯವಾಗಿ ಈಗ ನನ್ನನ್ನೇನು ವಿಚಾರಿಸುವುದು? ಜಯದ್ರಥನನ್ನು ಮುಂದೆ ಮಾಡಿ, ನೀವು ಅಭಿಮನ್ಯುವಿನನ್ನು ಸಂಹರಿಸಿದಿರಿ. ತಿಳಿದೂ ತಿಳಿದೂ, ಅನ್ಯಾಯದಿಂದ ಆ ಮಗುವನ್ನು ಸ್ವರ್ಗಕ್ಕೆ ಅಟ್ಟಿದಿರಿ! ಆಗ್ಗೆ ಈ ದ್ರೋಣಾಚಾರ್ಯರನ್ನು ವಿಚಾರಿಸಿದಿರಾ ? ಮಾಡಿದ ಕರ್ಮವನ್ನು ಅನುಭೋಗಿಸಲೇಬೇಕು ! ಕುಮಾರ ಅಭಿಮನ್ಯುವಿನ ಸಂಹಾರದ ಬಗ್ಗೆ, ಸೇಡು ತೆಗೆದುಕೊಳ್ಳುವ ಪ್ರತಿಜ್ಞೆಯನ್ನು, ಪರಾಕ್ರಮಶಾಲಿಯಾದ ಅವನ ಪಿತನು ಮಾಡಿದ್ದರೆ, ಅದೇನು ಆಶ್ಚರ್ಯದ ಸಂಗತಿಯಲ್ಲ. ಆ ವೀರಬಾಲಕನನ್ನು ಮೋಸಮಾಡಿ ಅಮಾನುಷ ರೀತಿಯಿಂದ ನೀವು ಸಂಹರಿಸಿದಾಗಲೆ, ಅಣುರೇಣುಗಳಲ್ಲಿಯ ಯಾವತ್ತು ಪರಮಾತ್ಮಶಕ್ತಿಯು, ನಿಮ್ಮ ಸೇಡು ತೀರಿಸಿಕೊಳ್ಳುವುದಕ್ಕೆ ಸಜ್ಜಾಗಿ ಕುಳಿತಿತು. ಅಭಿಮನ್ಯುವಿನ ಅನ್ಯಾಯದ ಮರಣದಿಂದ ನಿಮ್ಮ ಪಾಪಕೂಪವು ತುಂಬಿತು ! ಈಗ ಆಚಾರ್ಯರನ್ನು ವಿಚಾರಿಸುವುದೆ ! ಈ ದ್ರೋಣಾಚಾರ್ಯನು ಜಯದ್ರಥನ ಪ್ರಾಣರಕ್ಷಣೆಯ ಸಲುವಾಗಿ ಯಾವ ಸಾಹಸವನ್ನೂ ಮಾಡಲಾರನು ! ಜಯದ್ರಥಾ. ನೀನು ನಿಜವಾಗಿ ವೀರನಾಗಿದ್ದರೆ ರಣಾಂಗಣದಲ್ಲಿ ಅರ್ಜುನನ ಕೂಡ ಯುದ್ಧಮಾಡಿ, ನಿನ್ನ ಪರಾಕ್ರಮದಿಂದಲೆ ಪ್ರಾಣರಕ್ಷಣೆ ಮಾಡಿಕೊ ! ಇದೇ ನಿನಗೆ ಈ ದ್ರೋಣಾಚಾರ್ಯರ ನಿರ್ದಾಕ್ಷಿಣ್ಯವಾದ ಹೇಳುವಿಕೆ !

**ದುರ್ಯೋ** :-- ಆಚಾರ್ಯರೆ ! ಈ ನಿಮ್ಮ ನಿರ್ದಾಕ್ಷಿಣ್ಯವಾದ ಹೇಳುವಿಕೆಯಿಂದ ನೀವು—ಪಾಂಡವರ ಪರಾಕ್ರಮದ ಕೌತುಕವನ್ನು ಮಾಡುತ್ತಿರುವಿರೆಂದು ಸ್ಪಷ್ಟವಾಗಿ ಸಿದ್ಧವಾಗುವದು. ಪಾಂಡವರು ಅತ್ಯಾಚಾರಿಗಳಾಗಿ ನಮ್ಮ ಕೌರವರ ಕುಲವನ್ನು ನಿರ್ಮೂಲವಾಗಿ ಸಂಹರಿಸಿದರೂ ಕೂಡ, ಆಚಾರ್ಯರ ಕೃತಘ್ನ ಅಂತಃಕರಣಕ್ಕೆ ಅದು ಸಂತೋಷಕರವೆ ಸರಿ !

**ದ್ರೋಣ** :— ಪಾಂಡವರು ಅತ್ಯಾಚಾರಿಗಳಲ್ಲ. ನೀವು ಅತ್ಯಾಚಾರಿಗಳು. ಕಪಟದ್ಯೂತದ ದುಷ್ಟವಿಚಾರವನ್ನು ಸೂಚಿಸಿಕೊಟ್ಟ–ಈ ಶಕುನಿಯು ಅತ್ಯಾಚಾರಿಯು! ತುಂಬಿದಸಭೆಯಲ್ಲಿ ದ್ರೌಪದಿಯ ವಸ್ತ್ರಕ್ಕೆ ಕೈಹಾಕಿ ಅವಳನ್ನು ನಗ್ನ ಮಾಡುವುದಕ್ಕೆ ಯತ್ನಿಸಿದ ಈ ದುಶ್ಶಾಸನನು ಅತ್ಯಾಚಾರಿಯು ! !

ಕಪಟತನದಿಂದ ಪಾಂಡವರ ರಾಜ್ಯವನ್ನು ಅಪಹರಿಸಿ ಅವರನ್ನು ವನವಾಸಕ್ಕೆ ಅಟ್ಟಿದಂಥ ಈ ದುರ್ಯೋಧನನು ಅತ್ಯಾಚಾರಿಯು ! ಅತ್ಯಾಚಾರಿಗಳು ಪಾಂಡವರಲ್ಲ; ಧರ್ಮಾತ್ಮರು, ನ್ಯಾಯ ಪಕ್ಷಪಾತಿಗಳು !!

**ಶಕುನಿ** :— ಸಾಕು, ಸಾಕು, ಆಚಾರ್ಯರೆ, ನಿಮ್ಮ ಪಕ್ಷಪಾತ ಬುದ್ಧಿಯು ಅನರ್ಥವನ್ನು ಮಾಡಿತು ದುರ್ಯೋಧನಾ, ನಡೆ, ಇಲ್ಲಿ ಹೆಚ್ಚು ಕಾಲ ನಿಂತು ನಮ್ಮ ಕೈಯಿಂದಲೇ ನಮ್ಮ ಶೋಭೆಯನ್ನು ಮಾಡಿಕೊಳ್ಳುವದ ರಲ್ಲಿ ಪುರುಷಾರ್ಥವಿಲ್ಲ. (ಹೋಗುವರು)

**ದ್ರೋಣ** :— (**ಸ್ವ**) ಅಧರ್ಮದ ಅಡ್ಡದಾರಿಯನ್ನು ತುಳಿಯುವ ನಿಮ್ಮಂತಹ ದುಷ್ಟ ಬುದ್ಧಿಗಳಾದ ವೀರರಿಗೆ, ಜಯವಾದರೂ ಹೇಗೆ ದೊರೆ ಯುವದು ? (ನೋಡಿ) ಆಹಹಾ, ಪಾರ್ಥನ ರಥವು ! ಸಮರ ಭೂಮಿಯ ಪರ ಹದ್ದಿನಮೇಲೆ ಬಂದು ನಿಂತಿತು. ಸೂರ್ಯನ ರಥಕ್ಕಿಂತಲೂ ಅಧಿಕವಾಗಿ ವೇಗದಿಂದ ಶ್ರೀಕೃಷ್ಣನು ಬಹು ಕೌಶಲ್ಯದಿಂದ ನಡೆಸುತ್ತಿರುವನು ಅರ್ಜುನ ಮತ್ತು ಶ್ರೀಕೃಷ್ಣರೆಂದರೆ ನರನಾರಾಯಣರ ಅವತಾರವು. ಧನುರ್ಧಾರೀ ಪಾರ್ಥನೆ, ನೀನೇ ಧನ್ಯನು, ಧನ್ಯನು ! ಭಗವಾನ್ ಶ್ರೀಕೃಷ್ಣಪರಮಾತ್ಮನೇ ನಿನಗೆ ಸಾರಥಿಯಾಗಿರುವನು. ಆಹಹಾ ! ಈ ನರನಾರಾಯಣರ ಮಂಗಲ ದರ್ಶನದಿಂದ ಯಾರ ಮನಸ್ಸು ಶಾಂತವಾಗಿ ಆನಂದವನ್ನು ಹೊಂದಲಾರದು !

ರಾಗ ಭೀಮಪಲಾಸ, ತಾಳ ತ್ರಿವಟ

ಜ್ಞಾನಶರಧಿ ನಿಗಮಾಗಮ ಗೋಚರ ‖ ಪಲ್ಲ ‖
ದೀನಭಕ್ತಪಾಲ । ಕರುಣಾಲವಾಲ ‖ ಅನುಪಲ್ಲ ‖
ಜೀವದೊಡೆಯನಿವ । ದೇವವರೇಣ್ಯ ‖
ಪಾವನಾಂಗ ಪರಮಾತ್ಮ ಪರಾತ್ಪರ ‖ ೧ ‖

ಅದೋ ಅರ್ಜುನನ ರಥವು ಇತ್ತ ಕಡೆಗೆ ಬರುತ್ತಿರುವದು

[ ಅರ್ಜುನನ ರಥವು ಬರುವದು; ಕೃಷ್ಣನು ರಥವನ್ನು ನಡೆಸುತ್ತಿರುವನು ]

**ಅರ್ಜುನ** :— (ಕೆಳಗಿಳಿದು) ಶ್ರೀ ಕೃಷ್ಣಾ, ರಥವನ್ನು ಇಲ್ಲಿಯೇ ನಿಲ್ಲಿಸು. ಇಲ್ಲಿಂದಲೇ ಕೌರವಸೇನೆಯ ಸಮಾಚಾರ ತಕ್ಕೊಳ್ಳುವದಕ್ಕೆ ನನಗೆ ಬಹಳ ಅನುಕೂಲವಾಗುವದು.

**ಶ್ರೀಕೃಷ್ಣ** :— (ವಿನೋದದಿಂದ) ಇದೋ ಮಹಾರಾಜರ ಅಪ್ಪಣೆ ಯಂತೆ ರಥವನ್ನು ನಿಲ್ಲಿಸುವೆನು.

**ಅರ್ಜುನ** :— ಕೃಷ್ಣಾ, ಇದು ವಿನೋದಕ್ಕೆ ಸಮಯವೇ ?

**ಶ್ರೀಕೃಷ್ಣ** :— ಪಾರ್ಥಾ, ಮಧ್ಯ ಮಧ್ಯ ಸ್ವಲ್ಪ ವಿನೋದವೂ ಬೇಕು; ಅದು ನಿನಗೆ ಆನಂದಕೊಡುವದು; ಅಲ್ಲದೆ ನಿನ್ನಂಥ ವೀರನ ಮನಸ್ಸು ರಣ ಸಂಗ್ರಾಮದಲ್ಲಿ ಕೂಡಾ ಶಾಂತ ಹಾಗೂ ಸಮತೋಲವಿರಬೇಕು. ಎಂತಹ ಪ್ರಸಂಗ ಬಂದರೂ ಎದೆಗುಂದದಿರುವದು, ಶೂರ ಅಂತಃಕರಣದ ಲಕ್ಷಣವು!

**ಅರ್ಜುನ** :— ಶ್ರೀಕೃಷ್ಣಾ, ಇನ್ನುಮೇಲೆ ಎಂತಹ ಶಾಂತತೆಯು! ಎಲ್ಲಿಯ ಸಮತೋಲವೃತ್ತಿಯು! ಆ ಜಯದ್ರಥನನ್ನು ಸಂಹರಿಸಿ, ನನ್ನ ಅಭಿ ಮನ್ಯುವಿನ ಕಪಟವಧೆಯ ಸೇಡು ತೀರಿಸಿಕೊಳ್ಳುವದಕ್ಕೆ, ನನ್ನ ಮನಸ್ಸು ಹಾತೊರೆಯುತ್ತಿರುವದು. ಜಯದ್ರಥನ ಪಾಪಾತ್ಮವು ರೌರವ ನರಕದಲ್ಲಿ ಕೊಳೆಯುತ್ತ ಬೀಳಬೇಕು. ಅಂದರೆ ನನ್ನ ಆತ್ಮಕ್ಕೆ ನಿಜವಾದ ಶಾಂತಿಯು—

ರಾಗ ಮಾಲಕಂಸ, ತಾಳ ತ್ರಿವಟ

ಆ ದುರುಳ ಸಿಂಧುನೃಪನ ವಧಿಸುವೆ ‖ ಪಲ್ಲವಿ ‖
ಅಧಮ ಘೋರ ಭೀಕರ ದುರಿತರಾಶಿ ‖ ಅನುಪಲ್ಲವಿ ‖
ನೀಚಾತ್ಮಾ ಸುತವಿರೋಧಿಯಾಗಿಹ ‖
ಕಡಿದಿಡುವೆ ಪಾತಕಿಯಾ ಕುಲಾರಿಯಾ ‖ ೧ ‖

**ಶ್ರೀಕೃಷ್ಣ** :— ಪ್ರತಿಯೊಬ್ಬ ಪಾಪಾತ್ಮನಿಗೋಸ್ಕರ ರೌರವನರಕದ ರಾಜ್ಯವು ಕಾದಿಡಲ್ಪಟ್ಟಿರುವದು. ಪ್ರತಿಯೊಬ್ಬನು, ತನ್ನ ಒಳಿತು, ಹೀನ ಕರ್ಮಗಳಿಂದಲೇ ಬಾಳುವನು ಇಲ್ಲವೆ ಸಾಯುವನು; ಅರ್ಜುನಾ, ಕೌರವರ ಪಾಪಕರ್ಮದ ಕತ್ತಲೆಯು ಪಸರಿಸುತ್ತ ನಡೆದಿದ್ದರಿಂದಲೇ ಪಾಂಡವರ ಪುಣ್ಯ ಕರ್ಮದ ಪ್ರಕಾಶವು, ವೃದ್ಧಿಯನ್ನು ಹೊಂದುತ್ತ ನಡೆದಿರುವದು. ನಿನ್ನ ಪ್ರತಿ ಜ್ಞೆಯು ಪೂರ್ಣವಾಗುವದೇ ಖಂಡಿತವೆಂದು ನಿನಗೆ—ಆತ್ಮವಿಶ್ವಾಸವಿರುವ ದಲ್ಲವೇ ?

**ಅರ್ಜುನ** :— ಹೌದು, ಹಾಗೆ ನನಗೆ ದೃಢವಾದ ಆತ್ಮವಿಶ್ವಾಸವಿದೆ.

**ಶ್ರೀಕೃಷ್ಣ** :— ಸರಿ ಹಾಗಾದರೆ, ಅದೇ ಆತ್ಮವಿಶ್ವಾಸ ನಿನ್ನ ಯಶಕ್ಕೆ ಶುಭಚಿನ್ಹವು. ಕೈಕೊಂಡ ಕಾರ್ಯದ ಅರ್ಧಕ್ಕಿಂತಲೂ ಅಧಿಕವಾದ ಯಶಸ್ಸು ಆತ್ಮವಿಶ್ವಾಸದ ಮೇಲೇ ಅವಲಂಬಿಸಿರುವದು.

**ಅರ್ಜುನ** :— (ಧನುಷ್ಯಕ್ಕೆ ಬಾಣ ಸಂಧಾನಮಾಡಿ) ಇದೋ ನೋಡು,

ಪ್ರತಿಜ್ಞೆಯನ್ನು ಪೂರ್ತಿಗೊಳಿಸುವ ಉದ್ಯೋಗಕ್ಕೆ ಈಗಲೇ ತೊಡಗುತ್ತೇನೆ.

**ದುರ್ಯೋ :**— (ಒಳಗಿನಿಂದ) ಅರ್ಜುನಾ, ಇನ್ನುಮೇಲೆ ಪ್ರತಿಜ್ಞೆಯ ಜೊತೆಗೆ ನಿನ್ನ ಪರಾಕ್ರಮದ ಪೊಳ್ಳು ಅಹಂಕಾರವನ್ನು ಮರೆತುಬಿಡು.

**ಅರ್ಜುನ :**— ಯಾರು ಮಾತಾಡಿದರು ಇಂತಹ ಸೊಕ್ಕಿನ ಶಬ್ದಗಳನ್ನು ! ಯಾರು ! ದುರ್ಯೋಧನನಾ, ಇದೋ ನೋಡು ನಿನ್ನ ದರ್ಪೋಕ್ತಿಗೆ ಪ್ರಾಯಶ್ಚಿತ್ತವನ್ನು ಕೊಡುತ್ತೇನೆ.

**ಶ್ರೀಕೃಷ್ಣ :**— ಹಾ- ಹಾ–ಅರ್ಜುನಾ ಯಾರಮೇಲೆ ಬಾಣಪ್ರಯೋಗ ಮಾಡುವೆ ? ಜಯದ್ರಥನ ಸಂಹಾರಕ್ಕೆ ಪ್ರತಿಜ್ಞೆ ಮಾಡಿದ್ದು ಮರೆತಿಯೋ ಹೇಗೆ? ಬೇರೊಬ್ಬನನ್ನು ಬಾಣಕ್ಕೆ ಬಲಿ ತಕ್ಕೊಳ್ಳುವಿಯಾ ?

**ಅರ್ಜುನ :**— ನಡೆ, ಹಾಗಾದರೆ, ನನ್ನ ಬಾಣದ ಬಲೆಯನ್ನು ನಾನು ಶೋಧಿಸಬೇಕು. ( ಹೋಗಹತ್ತುವನು )

**ದ್ರೋಣ :**— (ಒಳಗಿನಿಂದ) ಅರ್ಜುನಾ ನಿಲ್ಲು, ಗುರುಪೂಜೆಯ ವಿನಹ ಈ ದ್ರೋಣಾಚಾರ್ಯರು ನಿನಗೆ ಒಂದು ಹೆಜ್ಜೆಯನ್ನು ಕೂಡ ಮುಂದಿಡಗೊಡಲಾರರು !

**ಅರ್ಜುನ :**— ಆಚಾರ್ಯರೆ, ಈ ಶಿಷ್ಯನ ಪೂಜೆಯನ್ನು ಸ್ವೀಕರಿಸಬೇಕು. (ಬಾಣಬಿಡುವನು)

**ಶ್ರೀಕೃಷ್ಣ :**— ಭಾಪು, ಭಾಪು, ಅರ್ಜುನಾ ಭಾಪು. ಒಂದೇ ಬಾಣದಿಂದ ಆಚಾರ್ಯರ ರಥವನ್ನು ಮುರಿದು ಹಾಕಿದೆ. ಅವರ ಕವಚವನ್ನು ತುಂಡರಿಸಿದೆ. ನಡೆಯಿನ್ನು, ನಿನ್ನ ಯಶದ ಮಾರ್ಗವು ನಿರಾತಂಕವಾಯಿತು.

( ರಥದಲ್ಲಿ ಕುಳಿತು ಹೋಗುವರು )

**ದ್ರೋಣ :**— ಭಾಪು ಅರ್ಜುನಾ. ಭಾಪು, ನೀನೇ ನನ್ನ ನಿಜವಾದ ಶಿಷ್ಯನು, ಒಂದೇ ಬಾಣದಿಂದ ನಿನ್ನ ಪರಾಕ್ರಮವನ್ನು ತೋರಿಸಿದೆ. ತ್ರಿಲೋಕದಲ್ಲಿ ಪ್ರಖ್ಯಾತವಾದ ನಿನ್ನ ಬಿರುದುಗಳು ಸಾರ್ಥಕವೆಂದು ಬೇಕಾದವರು ಹೇಳಬಹುದು. ಶಿಷ್ಯನ ಸನ್ಮಾನವು ಗುರುವಿನದು !

( ಪರದೆಯಲ್ಲಿ ರಣದುಂದುಭಿಗಳು ಮೊಳಗುವವು )

ಎಲಾ ಇದೇನು ಚಮತ್ಕಾರವು ! ಅರ್ಜುನನು ಹಾ ಹಾ ಅನ್ನುವಷ್ಟರಲ್ಲಿ ಯುದ್ಧವನ್ನು ಪ್ರಾರಂಭಿಸಿ ನೂರಾರು ವೀರರನ್ನು ನೆಲಕ್ಕುರುಳಿಸಿದನು. ಕೆಲ

ವರನ್ನು ಓಡಿಸಿದನು. ಎಲ್ಲ ಕಡೆಯಲ್ಲಿಯೂ ಯುದ್ಧದ ಬೇಗೆಯು ಹಬ್ಬಿತು. ಜಯದ್ರಥನೆಲ್ಲಿ? ಅವನೇ ಕಾಣುವದಿಲ್ಲವಲ್ಲಾ? (ಹೋಗುವನು)

**ಜಯ :—** (ಪ್ರವೇಶಿಸಿ) ಆಚಾರ್ಯರೇ! ಆಚಾರ್ಯರೇ! ಈ ಸಮಯದಲ್ಲಿ ನನ್ನನ್ನು ಯಾರಾದರೂ ರಕ್ಷಿಸಿರಿ, ಅರ್ಜುನನು ಕೆರಳಿದ ಸಿಂಹ ದಂತೆ ನನ್ನ ಬೆನ್ನಟ್ಟಿರುವನು ಎಲ್ಲಿ ಹೋಗಲಿ! ಎಲ್ಲಿ ಅಡಗಲಿ! ಜಯದ್ರಥಾ ಓಡು, ಓಡು, ನಿನ್ನ ಪ್ರಾಣಾಂತಕನು ನಿನ್ನ ಹಿಂದೆಯೇ ಬಂದನು. ಓಡು, ಓಡು, (ಹೋಗುವನು)

**ಅರ್ಜುನ :—** (ಪ್ರವೇಶಿಸಿ) ಎಲ್ಲಿರುವನು! ಎಲ್ಲಿರುವನು! ಆ ಕುಲಾ ಧಮನು? ಷಂಢಾ ಎಲ್ಲಿ ಓಡಿ ಹೋಗುವೆ? ಸಪ್ತಸಮುದ್ರದ ಅಡಿಯಲ್ಲಿ ಅಡಗಿಕೊಂಡರೂ ಅಲ್ಲಿಯೇ ನಿನಗೆ ಕಂಠಸ್ನಾನ ಮಾಡಿಸುವೆನು, ಗಿರಿಕಂದರ ಗಳಲ್ಲಿ ಅಡಗಿಕೊಂಡರೂ ಅಲ್ಲಿಯೇ ನಿನ್ನ ಪಾಪೀ ದೇಹವನ್ನು ಸೀಳಿ, ಕಾಡು ಮೃಗಗಳಿಗೆ ಸಂತರ್ಪಣೆ ಮಾಡಿಸುವೆನು. ಮೂರು ಲೋಕವನ್ನೇ ತಲೆಕೆಳಗೆ ಮಾಡಿ, ನಿನ್ನನ್ನು ಶೋಧಿಸಿ, ನನ್ನ ಘೋರ ಪ್ರತಿಜ್ಞೆಯನ್ನು ಪೂರ್ಣಗೊಳಿಸು ವೆನು. (ಹೋಗುವನು)

**ಶ್ರೀಕೃಷ್ಣ :—** ಕಾಲಚಕ್ರದ ಕ್ರೂರಗತಿಯು ಎಷ್ಟು ವಿಚಿತ್ರವಾಗಿದೆ. ಎಲ್ಲಿಯವರೆಗೆ ದುರ್ಯೋಧನ ಜಯದ್ರಥರಂತಹ ದುರಾತ್ಮರು ಧರ್ಮದ, ನ್ಯಾಯದ, ಅಖಿಲ ಮಾನವ ಜಾತಿಯ ಮಹಾ ಶತ್ರುಗಳು ಭೂತಲದಮೇಲೆ ಸ್ವೇಚ್ಛಾಚಾರಿಗಳಾಗಿ ಕುಣಿಯುತ್ತಿರುವರೋ ಅಲ್ಲಿಯವರೆಗೆ, ಧರ್ಮ ಶಾಂತ ತೆಯ ಸಾಮ್ರಾಜ್ಯವು ಸ್ಥಾಪಿತನಾಗುವದಾದರೂ ಹೇಗೆ? ದುರ್ಯೋಧನಾ, ಕಪಟ ಕಾರಸ್ಥಾನದಿಂದ ನಿನ್ನಂತಹ ಬಲತ್ಕಾರೀ ರಾಜ್ಯಕರ್ತರು ತಮ್ಮ ಅಘ ಟಿತ ಸತ್ತೆಯನ್ನು ಪ್ರಸ್ಥಾಪಿಸಿರುವರು. ಆದರೆ ಕಾಲದ ವಕ್ರಗತಿಯಿಂದ ಸಿಂಹಾಸನ ಸಹಿತವಾಗಿ ಆ ಸಮ್ರಾಟರು ಯಾವಾಗ್ಗೆ ಧೂಳಿಗೀಡಾಗುವರೋ ಅದರ ಚಿಹ್ನವು ಕೂಡಾ ನಿನ್ನ ಮದಾಂಧವೃತ್ತಿಗೆ ತಿಳಿಯಲಾರದು. ಅವಿವೇಕಿ ಅಧಮರ ಅಧಃಪಾತವು ಬಹುಜಾಗ್ರತೆಯಾಗಿ ಆಗುವದು. ದಿವಸದ ಮೂರನೇ ಪ್ರಹರವು ಮೀರಿಹೋಯಿತಾದರೂ, ಜಯದ್ರಥನು ಅರ್ಜುನನ ಬಾಣದ ಬಲೆಗೆ ಸಿಕ್ಕಲಿಲ್ಲವಲ್ಲಾ! ಸೂರ್ಯನು ಮುಳುಗುವವರೆಗೆ ಆ ದುಷ್ಟನು ಹೀಗೆ ಅಡಗಿಕೊಂಡು ಕುಳಿತರೆ, ಧನಂಜಯನ ಪ್ರತಿಜ್ಞೆಯು ಪಾರುಗಾಣುವ ಬಗೆ

ಹೇಗೆ ? ಕಾಲ ಬಂದಾಗ್ಗೆ ಪಾರ್ಥನ ಮರ್ಯಾದೆಯನ್ನು ನಾನೇ ಕಾಯ ಬೇಕಲ್ಲವೆ ? ಕಪಟದ ಸಂಹಾರವನ್ನು ಕಪಟದಿಂದಲೇ ಮಾಡಬೇಕು ಶಠಂ ಪ್ರತಿಶಾಠ್ಯಂ ಇದು ನ್ಯಾಯವು. ಸುದರ್ಶನಾ, ಈ ದಿವಸ ನಿನ್ನ ಸಹಾಯದಿಂದ ಜಯದ್ರಥನ ವಧೆಯ ಕಾರ್ಯಭಾಗವನ್ನು ಕೊನೆಗಾಣಿಸಬೇಕಾಗುವದು. ಯಾಕಂದರೆ—

ರಾಗ ಭೈರವಿ, ತಾಳ ತ್ರಿವಟ

ಮಮ ಪಾಂಡವಾ । ಪ್ರಿಯಾ ॥ ಪಲ್ಲ ॥
ಸುಖಶ್ರೀಯಾ । ಧೇಯಾ ಮದಿಯಾ ॥ ಅನುಪಲ್ಲ ೨ ॥
ಕೃತಮಾಯೆಯಾ । ಕೃತಿಯಿಂದ ನಾನು ॥
ಅತಿ ಪ್ರೇಮದೀ ತೋರ್ಪೆ ಪಾರ್ಥವಿಜಯಾ ॥ ೧ ॥

[ ಕೃಷ್ಣನು ಹೋಗುವನು, ಮೇಘನಾದ ಸೌದಾಮಿನಿಯರು ಲಗುಬಗೆಯಿಂದಬರುವರು]

**ಸೌದಾ** :— ಅದೋ ನೋಡಿರಿ, ಶ್ರೀಕೃಷ್ಣ ಮಹಾರಾಜರ ಹೋಗುತ್ತಿರುವರು. ಅವರನ್ನೇ ವಿಚಾರಿಸಿರಿ.

**ಮೇಘ** :— ಅವರನ್ನೇನು ವಿಚಾರಿಸುವದು ? ಬುದ್ಧಿವಂತರಾದವರು, ಸ್ತ್ರೀಯರ ವಿಷಯವಾಗಿ ಶ್ರೀಕೃಷ್ಣನ ವಿಚಾರವನ್ನು ಕೇಳಬಾರದೆಂದು ನಮ್ಮ ಸಿದ್ಧಾಂತವಿದೆ!

**ಸೌದಾ** :— ಅದೇಕೆ ?

**ಮೇಘ** :— ಏನೆ, ಶ್ರೀಕೃಷ್ಣನ ವಿಚಿತ್ರವಾದ ಚರಿತ್ರವು, ಸರ್ವ ಜಗತ್ತಿಗೇ ಗೊತ್ತಾಗಿ ಹೋಗಿದೆ. ಸ್ತ್ರೀಯರ ವಿಷಯವಾಗಿ ಶ್ರೀಕೃಷ್ಣನ ಬುದ್ಧಿಯು ಬಾಲ್ಯದಲ್ಲಿಯೇ ತಾಳಗೆಟ್ಟಿತೆಂಬವನ್ನು ಒಬ್ಬ ಸಣ್ಣ ಹುಡುಗನು ಕೂಡ ಹೇಳಬಹುದು. ಗೋಕುಲದಲ್ಲಿಯ ಯಾವತ್ತೂ ಗೋಪಿಯರ ಮೇಲೆ ಈ ಬಹದ್ದರನು ತನ್ನಮೋಹಜಾಲವನ್ನು ಪಸರಿಸಿದನು

**ಸೌದಾ** :— ಏನು ಮಾತಾಡುವಿರಿ, ಆತನ ಚರಿತ್ರದ ರಹಸ್ಯವು ನಿಮ್ಮಂಥ ಭ್ರಷ್ಟಮತಿಗಳಿಗೆ ಹೇಗೆ ಗೊತ್ತಾದೀತು.

**ಮೇಘ** :— ಏನೆ, ಆತನ ಚರಿತ್ರವು ಇಷ್ಟು ರಹಸ್ಯಪೂರ್ಣವಿರುವದರಿಂದಲೇ ಜಗತ್ತಿನ ಪಂಡಿತರು, ಆತನ ವಿಷಯವಾಗಿ ದೊಡ್ಡ ದೊಡ್ಡ ಗ್ರಂಥಗಳನ್ನು ಬರೆದಿರಬಹುದೆಂದು, ನನ್ನ ಸಿದ್ಧಾಂತವಿದೆ !

**ಸೌದಾ** :— ಸರ್ವಜಗತ್ತು, ಅಲ್ಲದೆ ಧರ್ಮರಾಜರೂ ಕೂಡಾ, ಶ್ರೀಕೃಷ್ಣನನ್ನು ಪ್ರತ್ಯಕ್ಷ ಪರಮಾತ್ಮನ ಅವತಾರವೆಂದೇ ಮನ್ನಿಸುವರು.

**ಮೋಘ** :— ಇದೆ ಇದೆ. ನಾನಾವರೂ ಹೇಳುವದು ! ಮನುಷ್ಯನಿಗೆ ದೊಡ್ಡಸ್ತಿಕೆಯು ದೊರೆತು, ಅವನು ಒಮ್ಮೆ ದೊಡ್ಡ ಮನುಷ್ಯರ ಪಂಕ್ತಿಯಲ್ಲಿ ಸೇರಿದನೆಂಪರೆ, ಈ ಕುರುಡ ಜಗತ್ತು—ಅವನ ಜತೆಗೆ ಕುಣಿಯುವದಕ್ಕೆ ಪ್ರಾರಂಭ ! ಪೂರ್ವದ ಕುಲಶೀಲ ಸಂಬಂಧವನ್ನು ಚಿಕಿತ್ಸಕ ಬುದ್ಧಿಯಿಂದ ಚರ್ಚೆಮಾಡತಕ್ಕ ನನ್ನಂತಹ ಮಹಾತ್ಮರು, ಭೂಮಿಯಲ್ಲಿ ಅವತರಿಸುವದು ಅಪರೂಪವೆಂದು ನನ್ನ ಸಿದ್ಧಾಂತವಿದೆ.

**ಸೌದಾ** :— ಸಾಕು-ಸಾಕು-ಕಂಡಷ್ಟೇ ಅದೆ ನಿಮ್ಮ ಬುದ್ಧಿವಂತಿಕೆ ! ಶ್ರೀಕೃಷ್ಣನ ನಿಂದೆಯ ನರಕವನ್ನು ಯಾರ ಮುಂದೆಯಾದರೂ ಹೀಗೆ ವಾಂತಿ ಮಾಡಿಕೊಂಡರೆ, ನಿಮ್ಮ ನಾಲಿಗೆಯು ಕಳಚಿಬಿದ್ದೀತು.

**ಮೋಘ** :— ಆದರೆ ಪ್ರಿಯೇ, ಒಂದರ ವಿಷಯದಲ್ಲಿ ಮಾತ್ರ—ಶ್ರೀಕೃಷ್ಣನ ಸ್ತುತಿಯನ್ನು ಎಷ್ಟು ಮಾಡಿದರೂ ಕಡಿಮೆಯೇ; ಯಾಕೆಂದರೆ ಒಬ್ಬ ಲಗ್ನದ ಹೆಂಡತಿಯನ್ನು ಸಂಭಾಳಿಸುವದು ನನ್ನಂತಹ ರುಸ್ತುಮನಿಗೆ ಪ್ರಾಣ ಸಂಕಟಕ್ಕೆ ಬಂದಿದೆ. ಆದರೆ ಶ್ರೀಕೃಷ್ಣನು ಹದಿನಾರು ಸಾವಿರ ಒಂದು ನೂರಾ ಎಂಟು ಲಗ್ನದ ಹೆಂಡಂದಿರ— ಆ ಪ್ರಚಂಡವಾದ ತ್ರಾಟಿಕೆಯರ ತಂಡವನ್ನು ಹೇಗೆ ಕುಶಲತೆಯಿಂದ ದೂಡಿಕೊಂಡು ಹೋಗುವನೋ ಅದು ಅವನಿಗೇ ಗೊತ್ತು. ಈ ವಿಷಯದಲ್ಲಿ ಮಾತ್ರ, ಶ್ರೀಕೃಷ್ಣನು ದೊಡ್ಡಕರ್ಮವೀರನೆಂದು ನನ್ನ ಸಿದ್ಧಾಂತವು! ಅದು ಹೋಗಲಿ ಬಿಡು. ಕೃಷ್ಣಲೀಲೆಯ ಪುರಾಣವನ್ನು ಮುಗಿಸಿ, ನನ್ನ ಶೌರ್ಯಶಾಸ್ತ್ರವನ್ನು ಸ್ವಲ್ಪ ನಿನಗೆ ತಿಳಿಸಿ ಹೇಳಬೇಕಾಗಿದೆ! ಈ ನಿನ್ನ ವೀರಪತಿಯು ರಣಾಂಗಣದಲ್ಲಿ ಮಡಿದರೆ, ನೀನು ಸತಿ ಹೋಗತಕ್ಕ ವಳೇ—ಇಲ್ಲವೆ ? ಹೇಳು ಮೊದಲು—

**ಸೌದಾ** :— ಇದೇನು ಹೀಗೆ ವಿಚಾರಿಸುವಿರಿ ? ನಿಮಗೆ ಹುಚ್ಚು ಹಿಡಿಯಿತೋ ಹೇಗೆ.?

**ಮೋಘ** :— ಏನು ಇದು ಹುಚ್ಚುತನವೆ, ಛೆ ಅಲ್ಲಾ, ಇದು ಬುದ್ಧಿವಂತಿಕೆಯ ಶಾಸ್ತ್ರವು. “ಗಂಡನು ಮಡಿದಕೂಡಲೆ ಹೆಂಡತಿಯು ಸತಿ ಹೋಗಲೇಬೇಕು” ಹೀಗೆ ಆರ್ಯ ಸನಾತನಧರ್ಮದ ಆಜ್ಞೆಯಿರುವದು; ಇದೇ ನಿಜವಾದ ಪತಿವ್ರತಾ ಧರ್ಮವು ! ಈಗ ನೀನು ಹೀಗೆ ತಿಳಿ, ವಿಧವಾ—

**ಸೌದಾ** :— ಏನು, ನಾನು ವಿಧವೆಯೇ ? ನೀವು ಇನ್ನೂ ಜೀವಂತ ವಾಗಿರುವಿರಲ್ಲವೆ ? ಅಂದಮೇಲೆ ಹೇಗೆ ನಾನು ವಿಧವೆಯು !

**ಮೋಘ** :— ನನ್ನ ಮಾತಿನ ಅಭಿಪ್ರಾಯವು ಹೀಗಿದೆ. ನೀನು ವಿಧವೆ ಯಾಗಿ ಜೀವಂತವಿದ್ದರೆ, ಧರ್ಮದ ಕೊಲೆಯಾಗಿ, ಪಾತಿವ್ರತ್ಯದ ಅಪಮಾನ ವಾದೀತೆಂದು ನನ್ನ ಸಿದ್ಧಾಂತ !

**ಸೌದಾ** :— ಅಂದರೆ ವಿಧವೆಯರಿಗೆ ಜಗತ್ತಿನಲ್ಲಿ ಬಾಳಲಿಕ್ಕೂ ಅಧಿ ಕಾರವಿಲ್ಲವೆ ?

**ಮೋಘ** : – ಲೇಶಮಾತ್ರವು ಇಲ್ಲ ! ಜಗತ್ತಿನ ಸರ್ವ ಆಪತ್ತಿಯ ಮೂಲಕಾರಣವೆಂದರೆ, ಈ ವಿಧವೆಯರು ! ಅದರಲ್ಲಿಯೂ ತರುಣ ಬಾಲ ವಿಧವೆಯರು ಮುಖ್ಯರು ! ಬಾಲವಿಧವೆಯರು ನಷ್ಟರಾಗಿ ವಿಶ್ವದ ಪಾಪ ಭಾರವು ಎಂದು ಹಗುರಾಗುವದೋ, ಅದೇ ಸುದಿನವು ! ಇದೇ ನನ್ನ ಸಿದ್ಧಾಂ ತವು.

**ಸೌದಾ** :— ಸುಮ್ಮಸುಮ್ಮನೆ ಹೀಗೆ ಬೊಗಳಬೇಡಿ. ಬೇಕೆಂತಲೇ ಬಾಲ ವಿಧವೆಯರ ಮೇಲೆ ಏನಾದರೂ ಕಲ್ಪಿಸಿಕೊಂಡು, ಪಾಪದ ಭಾರವನ್ನು ಅವರ ತಲೆಯ ಮೇಲೆ ಹೊರಿಸಬೇಡಿ.

**ಮೋಘ** : – ನಿನಗೆ ತಲೆಯೇ ಇಲ್ಲ. ತರುಣ ವಿಧವಾ ಎಂದರೆ—

**ಸೌದಾ** :— ನಿಮ್ಮ ತಲೆಬುರುಡೆ ! ಶುದ್ಧ ಶೀಲವುಳ್ಳ ಸ್ತ್ರೀಜಾತಿಯ ನಿಂದೆಯನ್ನು ಮಾಡುವ ನಿಮ್ಮಂತಹ ಪುರುಷರನ್ನು ಜೀವಸಹಿತ ಸುಡಿಸ ಬೇಕು. ನೀವು ಹೀಗೆ ಹೇಳುವಿರಿ; ಆದರ ಉತ್ತರಾ ದೇವಿಯವರೂ ಬಾಲ ವಿಧವೆಯಲ್ಲವೆ ? ಅವರನ್ನು ನೋಡಿ ! ನಿಮ್ಮಂಥವರು ದಿನಾಲು ಅವರ ಚರಣ ತೀರ್ಥವನ್ನು ತಗೊಳ್ಳಬೇಕು. ಅಷ್ಟು ಅವರ ಯೋಗ್ಯತೆಯು ದೊಡ್ಡದಿದೆ !

**ಮೋಘ** :— ನಿಯಮಕ್ಕೆ ಅಪವಾದವು ಇದ್ದೇಯಿದೆ; ಮತ್ತು ಅಪ ವಾದದಿಂದಲೇ ನಿಯಮವು ಸಿದ್ಧವಾಗುವದು. ಹೋಗಲಿ ಬಿಡು, ದೊಡ್ಡವರ ಮನೆಯ ಮಾತು, ನಮ್ಮಂತಹ ಬಡವರಿಗೇಕೆ ಬೇಕು. ಆದರೆ ಮನಸೋಕ್ತ ವಾದ ಕೆಟ್ಟ ಚಾಳೀ ಮಾಡುವದಕ್ಕೆ ಸವಿಗಲಿತಿರುವ ಈ ಸ್ತ್ರೀಯರು—ಬೇಡಪ್ಪಾ ಈ ಸ್ತ್ರೀಯರನ್ನು ನಂಬುವದೇ ಕಷ್ಟ. ಅವರಲ್ಲಿ ನಿನ್ನ ಮೇಲೆಯಂತೂ ಸರ್ವಥಾ ನನ್ನ ವಿಶ್ವಾಸವೇ ಇಲ್ಲ. ಅದಕ್ಕೋಸ್ಕರವೇ ಇಷ್ಟೊಂದು ಅಟ್ಟ

ಹಾಸವು. ನಿನ್ನ ಥಳಕು, ಬಡಿವಾರ, ಡೌಲು, ನನ್ನ ಸೂಕ್ಷ್ಮದೃಷ್ಟಿಗೆ ಕಾಣಿಸುವದಿಲ್ಲವೆಂದು ತಿಳಿದಿರುವೆಯಾ ? ಅದೇನು ಇಲ್ಲ. ಪ್ರಮಾಣವಾಗಿ ಹೇಳು, ನಾನು ಸತ್ತಮೇಲೆ ನೀನು ಸತಿ ಹೋಗುವಿಯಲ್ಲವೆ ? ಜಾಗ್ರತೆಯಾಗಿ ಹೇಳು ಯುದ್ಧಕ್ಕೆ ಹೋಗಲು ತಡವಾಗುವದು.

ರಾಗ ಗಾರಾ, ತಾಳ ದಾದರಾ

ವೀರಭಟರ ಬಾಣವೇಗ ಸುಯ್ಯು ಸುಯ್ಯನೆ ।
ಧ್ವನಿಯು ಕೇಳು ನೀ ॥ ಪಲ್ಲ ॥
ಖಡ ಖಡ ಖಡ ಖಡ್ಗಗಳಾ । ಬಡಿದಾಟಕೆ ವೈರಿಗಳಾ ॥
ಬಿಡದೆ ಹೃದಯ ಭೇದವಾಗಿ । ಓಡುತಿಹರು ಸಮರ ತೊಲಗಿ ॥ ೧ ॥

**ಸೌದಾ** :— ಯಾರಿಗೆ ಭಯ ತೋರಿಸುವಿರಿ ? ನಿಮ್ಮ ಪರಾಕ್ರಮದ ಡೌಲು ನಿನ್ನಿನ ಯುದ್ಧದಲ್ಲಿ ಕಂಡದ್ದೇ ಅದೆ.

**ಮೋಘ** :— (ಸ್ವಗತ) ಬೇಡಪ್ಪಾ—ಆಪ್ರಸಂಗ ಸ್ಮರಣಕ್ಕೆ ಬಂದ ಕೂಡಲೇ ಮೈಮೇಲೆ ಮುಳ್ಳುಗಳೇಳುವವು. ಅಪಮಾನದ ಸೇಡು ತಕ್ಕೊಳ್ಳಲೇಬೇಕು ! (ಪ್ರ) ಹೂ ವಚನ ಕೊಡು. ಯುದ್ಧಕ್ಕೆ ಹೋಗಲು ಹಾತೊರೆಯುವಂಥ ಈ ವೀರನುಕೇವಲ ನಿನ್ನ ವಚನದ ಮಾರ್ಗವನ್ನೇ ಕಾದಿರುವನು. ಈ ದಿವಸ ನಾನು, ಯುದ್ಧದಲ್ಲಿ ಸಾಯಬೇಕು; ನೀನು ಸತಿಹೋಗಬೇಕು. ಇದೇ ನನ್ನ ಮನಃಪೂರ್ವಕವಾದ ಇಚ್ಛೆ ! ಈ ಸುಯೋಗವು ಕೂಡಿ ಬಂದರೆ, ನನಗೂ, ಮತ್ತು ನಿನಗೂ ಇಬ್ಬರಿಗೂ ಸ್ವರ್ಗಪ್ರಾಪ್ತಿಯಾಗುವದೆಂದು ನನ್ನ ಸಿದ್ಧಾಂತವಿದೆ.

**ಸೌದಾ** :— ಬೆಂಕಿ ಹಚ್ಚಲಿ ನಿಮ್ಮ ಸಿದ್ಧಾಂತಕ್ಕೆ. ಹೂ ತೆಗೆದು ಕೊಳ್ಳಿರಿ ವಚನವನ್ನು ! ನೀವು ನಿಜವಾಗಿ ನತ್ತರೆ, ನಾನು ಸತಿಹೋಗುವೆನು. (ದೊಡ್ಡ ದನಿಯಿಂದ) ಕೇಳಿಸಿತೆ.

**ಮೋಘ** :— ಭಾಪು ಪ್ರಿಯೇ, ನೀನು ಪತಿವ್ರತೆಯೆಂಬುದು ನನಗೆ—ಈಗ ಚನ್ನಾಗಿ ತಿಳಿಯಿತು. ಮನಸ್ಸಿಗೆ ಸಮಾಧಾನವಾಯಿತು. ಗಂಡನು ಮಡಿದ ಕೂಡಲೇ ಪ್ರಾಣ ಬಿಡತಕ್ಕವಳು ನಿಜವಾದ ಆರ್ಯ ಪತಿವ್ರತೆಯೆಂದು ನನ್ನ ಸಿದ್ಧಾಂತವು ! ಒಳ್ಳೇದು ನಾನಿನ್ನು ಹೋಗಲೆ.

**ಸೌದಾ** :— ಸುಖವಾಗಿ ಹೋಗಿರಿ. ನಿಮ್ಮ ಪ್ರೇತವು ರಣಾಂಗಣಕ್ಕೆ ಹೋಗುವದೇ ನನಗೆ ಬೇಕಾಗದೆ.

**ಮೋಕ್ಷಾ** :— ಸುತ್ತ ತಿರುಗಿ) ಇನ್ನೋ ನಿನಗೆ ಮತ್ತೊಂದು ವಿಷಯ ಹೇಳುವದನ್ನು ಮರತೆ. ಈ ನಿನ್ನ ಕುಂಕುಮವನ್ನು ನೀನು ತುಂಬ–ಒಳ್ಳೇ ದೊಡ್ಡದಾಗಿ ಒಂದು ಮೋರ ಹಚ್ಚು.

**ಸೌದಾ** :— ಯಾಕೆ, ಈಗಲೇ ಸತಿಹೋಗಬೇಕೆಂದು ಹೇಳುವಿರೋ ಹೇಗೆ ?

**ಮೋಘ** :— ಹಾಗಲ್ಲವೇ ಪ್ರಿಯೆ-ಗಂಡಸರ ಆಯುಷ್ಯ ಪ್ರಮಾಣವು, ಹೆಂಗಸರ ಕುಂಕುಮದ ಆಕಾರದ ಮೇಲೆಯೇ ಅವಲಂಬಿಸಿದೆ. ಹೋಗಲಿ ಬಿಡು, (ಯೋಚಿಸಿ) ಆ ದೊಡ್ಡ ತಿಲಕವು–ಬೇಡವೆ ಬೇಡ. ಈಗಿರುವ ಸಣ್ಣ ಕುಂಕುಮನ್ನೇ ಒಳ್ಳೇ ಚನ್ನಾಗಿ ಕೊರೆದು, ಕೊರೆದು ತೀರಾ ಕಾಣಿಸುವದೋ ಇಲ್ಲವೋ ಹಾಗೆ ಒಂದು ಎಳ್ಳುಕಾಳಷ್ಟು ಮಾಡು; ಅಂದರೆ ನಾನು ಯುದ್ಧ ದಿಂದ ಜೀವಂತನಾಗಿ ತಿರುಗಿ ಬರುತ್ತೇನೆಂಬುವ ಆಶೆಗೆ, ಎಳ್ಳುಕಾಳಷ್ಟು ಕೂಡಾ ಅವಕಾಶವಿಲ್ಲದಂತಾಗುವದು.

**ಸೌದಾ** :— ನಿಮ್ಮಮುಂದೆ ಅಳಬೇಕೊ, ಅಥವಾ ನಗಬೇಕೊ ಇವೇ ತಿಳಿಯದಾಗಿದೆ.

**ಮೋಘ** ನಾನು ಜೀವದಿಂದಿರುವವರೆಗೆ ಬೇಕಾದಷ್ಟು ನಗು. ನಾನು ಸತ್ತಮೇಲೆ, ಅಳುವದು ನಿನ್ನ ಪಾಲಿಗೆ ಇದ್ದೇಯಿದೆ. ಯಾಕಂದರೆ ಗಂಡನು ಸತ್ತಮೇಲೆ, ಆತನ ಹೆಸರಿನಿಂದ ಸ್ತ್ರೀಯರು ಶೋಕಿಸಲೇಬೇಕು. ಹೀಗೆ ನನ್ನ ಸಿದ್ಧಾಂತವಿದೆ !

**ಸೌದಾ** :— ನಿಮ್ಮ ತಲೆಯೆಂದರೆ ಕತ್ತೆಯ ತಲೆಯು. ಹೀಗೆ ನನ್ನ ದಾದರೂ ಸಿದ್ಧಾಂತವದೆ. ಹೂ ನಡೆಯಿರಿನ್ನು ಜಾಗ್ರತೆಯಾಗಿ ಯುದ್ಧಕ್ಕೆ ! (ಹೋಗುವಳು)

**ಮೋಘ** :— ಯಾವ ಮುಂಡೆಮಗನಿಗೆ ಬೇಕಾಗಿದೆ ಯುದ್ಧವು. ಇವ ಳಂತೂ ಸತಿಹೋಗುವೆನೆಂದು ವಚನಕೊಟ್ಟಿದ್ದಾಳೆ ! ನಾನು ಸುಳ್ಳೇ ಸತ್ತವ ನಂತೆ ನಟಿಸಿ, ಇವಳನ್ನು ಪರೀಕ್ಷಿಸುವೆನು. ಅದರ ವಿನಹ ಇವಳ ಮೇಲೆ ವಿಶ್ವಾಸವಿಡಬಾರದೆಂದು ನನ್ನ ಸಿದ್ಧಾಂತವು ! (ಹೋಗುವನು)

———

# ಎರಡನೆಯ ಪ್ರಸಂಗ

( ವನಪ್ರದೇಶವು ಜಯದ್ರಥನು ಬರುತ್ತಾನೆ. )

**ಜಯ :—** ಕಾಲವು ಅನುಕೂಲವಿತ್ತೆಂದು, ನಾನು ಅರ್ಜುನನ ಬಾಣದ ಹೊಡೆತಕ್ಕೆ ಸಿಲುಕದೆ ಪಾರಾದೆನು. ಅವನ ಬಾಣದ ಗುರಿಯನ್ನು ಹೇಗೋ ತಪ್ಪಿಸಿಕೊಂಡೆ, ಆದರೆ ಪರಮಾತ್ಮನ ಸಂಕಲ್ಪವನ್ನು ತಪ್ಪಿಸುವದು ನನ್ನಿಂದ ಸಾಧ್ಯವೇ ! ಸೂರ್ಯಾಸ್ತವಾಗುವದಕ್ಕೆ ಇನ್ನೂ ಎರಡು ಗಳಿಗೆ ಅವಕಾಶವಿದೆ. ಈ ದಿವಸ ಈ ಜಯದ್ರಥ, ಇಲ್ಲವೆ ಅರ್ಜುನ ಇಬ್ಬರೊಳಗೊಬ್ಬರು ಖಂಡಿತವಾಗಿ ಈ ಜಗತ್ತಿನ ಆಶೆಯನ್ನು ಬಿಡಲೇಬೇಕು. ಪಾರ್ಥಾ ! ಈ ಜಯದ್ರಥನು ಈ ದಿವಸ ಬದುಕಿದನೆಂದರೆ, ಚಿರಂಜೀವಿಯಾದನೆಂತಲೇ ತಿಳಿ. ಈ ದಿವಸ ಮುಳುಗುವ ಸೂರ್ಯದರ್ಶನವೇ ನಿನಗೆ ಕೊನೆಯದು; ಮತ್ತು ನಾಳೆ ಉದಯಿಸುವ ಸೂರ್ಯದರ್ಶನವು ಸರ್ವ ಪಾಂಡವರಿಗೆ ಕೊನೆಯದು. ಪಾಂಡವರ ಮನೆಮಾರುಗಳನ್ನು ನೆಲಸಮನಾಗಿ ಮಾಡದಿದ್ದರೆ, ನಾನು ಜಯದ್ರಥನೆ ಅಲ್ಲ ! (ಆಚೆಗೆ ನೋಡಿ) ಆದರೆ ಇವಳು ಯಾರು ! ಯೋಗಿನಿಯ ವೇಷದಿಂದ ಅರಣ್ಯದಲ್ಲಿ ಸಂಚರಿಸುತ್ತಿರುವಳು. ಇವಳು ಉತ್ತರೆಯು; ಅಭಿಮನ್ಯುವಿನ ಸತಿಯು ! ಸರಿ ಹಾಗಾದರೆ-ಇವಳಿಗೂ ಇವಳ ಗಂಡನ ಮಾರ್ಗವನ್ನೇ ತೋರಿಸಬೇಕು ! ! ತಾನಾಗಿ ನಡೆದು ಬಂದ ಬಂಗಾರದಂತಹ ಸಂಧಿಯನ್ನು ಕಳೆದುಕೊಂಡು ಪ್ರಯೋಜನವಿಲ್ಲ. (ಒಂದು ಬದಿಗೆ ಸರಿದು ನಿಲ್ಲುವನು)

( ಉತ್ತರಾ ಸೌದಾಮಿನಿಯರು ಬರುವರು )

**ಉತ್ತರಾ :—** ಸೌದಾಮಿನಿ, ನೀನು ಮರಳಿ ಹೋಗು. ಏತಕ್ಕೆ ಬರುವೆ ನನ್ನ ಜೊತೆಗೆ ! ಈ ಸನ್ಯಾಸಿನಿಯಾದ ಉತ್ತರೆಗೆ ಈ ಸಂಸಾರದ ಮಾಯಾಪಾಶವು ಇನ್ನೇತಕ್ಕೆ ಬೇಕು. ಈ ಉತ್ತರೆಗೆ ಈ ಜೋಗಮ್ಮನ ವೇಷವೇ ಆನಂದದಾಯಕವಾಗಿದೆ.

**ಸೌದಾ :—** ದೇವಿಯವರೇ ಹೀಗೆ ಮಾಡಬೇಡಿ, ಹೀಗೆ ವನದಲ್ಲಿ ತಿರುಗುವದನ್ನು ಸಾಕುಮಾಡಿ, ಬಿಡಾರಕ್ಕೆ ನಡೆಯಿರಿ.

**ಉತ್ತರಾ :—** ಇನ್ನು ಬಿಡಾರದಲ್ಲಿಯಾದರೂ ಏನಿರುವದು ! ದೇವರಿಲ್ಲದ ಮನೆಯಲ್ಲಿ ಬಂದು ನಾನೇನು ಮಾಡಲಿ ! ಸೌದಾಮಿನಿ ನೀನು ಮರಳಿ

ಹೋಗಿದೆ. ಆಹಾ! ನೋಡು, ನನ್ನ ಪತಿದೇವರ ಮೂರ್ತಿಯು ಅಣುರೇಣು ಗಳಲ್ಲಿ ತುಂಬಿಕೊಂಡಂತೆ ನನಗೆ ಕಾಣುವದು.

ಸೌದಾ :- ದೇವಿ ಹೀಗೇಕೆ ಮಾಡುವಿರಿ ? ನಿಮಗೆ ಹುಚ್ಚು ಹಿಡಿ ಯಿತೋ ಹೇಗೆ? ಮನಸ್ಸಿನಲ್ಲಿ ಉತ್ಸಾಹವಿಲ್ಲದ್ದರಿಂದ ಮುಖಮುದ್ರೆಯ ಮೇಲೆ ಆನಂದದ ಚಿನ್ಹವೇ ಇಲ್ಲ.

ಉತ್ತರಾ :— ಹುಚ್ಚೀ ನನ್ನ ಆನಂದದ ವಿಸ್ತಾರವು, ವಿಶ್ವಕ್ಕಿಂತಲೂ ಅಧಿಕವಾಗಿ ವ್ಯಾಪಿಸಿರುವದು. ನನ್ನ ಮನಸ್ಸಿನಲ್ಲಿ ಮಂಗಳಕರವಾದ ಲೋಕ ಸೇವೆಯ ಕಲ್ಪನೆಗಳು ಉತ್ಪನ್ನವಾಗುತ್ತಿರುವವು. ಅನಾಥ ದೀನ ಜನರ ಪವಿತ್ರ ಸೇವೆಯಲ್ಲಿಯೇ ನನ್ನ ಉಳಿದ ಆಯುಷ್ಯವನ್ನು ಕಳೆಯಬೇಕೆಂದು, ನಾನು ನಿಶ್ಚಯ ಮಾಡಿರುವೆನು. ಲೋಕ ಸೇವೆಯೇ ಆತ್ಮೋದ್ಧಾರದ ಮಾರ್ಗವು.

ಸೌದಾ :— ನೀವು ಏನು ಮಾತಾಡುವಿರೋ, ಅದು ಆ ಪರಮೇಶ್ವ ರನೇ ಬಲ್ಲ. ನನಗಂತೂ ಒಂದು ಅಕ್ಷರ ತಿಳಿಯಲಿಲ್ಲ.

ಉತ್ತರಾ :— ಏನೇ ಅದರಲ್ಲೇನು ಅಂತಹ ಗೂಢವಿದೆ. ಅಖಂಡ ವಾಗಿ ಲೋಕಸೇವೆಯನ್ನು ಮಾಡಿ, ಅನಂತ ಪುಣ್ಯವನ್ನು ಸಂಪಾದಿಸ ಬೇಕೆಂಬುದೇ ವಿಧವಾವ್ರತದ ಕರ್ತವ್ಯವು. ಬಿಡು ನನ್ನನ್ನು, ಈ ಸನ್ಯಾಸಿನಿ ಉತ್ತರೆಯ ಮನಸ್ಸನ್ನು ಎಳೆಯುವಂತಹ ಮಾಯಾ ಬಂಧನವು, ಈ ಶೂನ್ಯ ಸಂಸಾರದಲ್ಲಿ ಒಂದು ಕೂಡಾ ಉಳಿದಿರುವದಿಲ್ಲ. ಹೋಗು ! ಸುಮ್ಮನೆ ನನಗೆ ತೊಂದರೆ ಕೊಡಬೇಡ,

ಸೌದಾ :— ತಮ್ಮ ಇಷ್ಟವು ನಾನೇನು ಮಾಡಲಿ (ಸ್ವಗತ) ಏನು ಮಾಡಬೇಕು; ಎಷ್ಟು ಹೇಳಿದರೂ ಇವರ ಮನಸ್ಸು ತಿರುಗುವದಿಲ್ಲ. [ ಹೋಗುವಳು ]

ಉತ್ತರಾ :— ದೇವಾ—

ರಾಗ ಕರ್ನಾಟಕೀ ತೋಡಿ, ತಾಳ ದಾದರಾ

ಭಕ್ತಜೀವನಾ ರಾಮು । ದುರಿತ ಭಂಜನಾ ॥ ಪಲ್ಲ ॥
ಸತ್ಯನಾಗಿ ಸಕಲ ಜಗವ । ನಿತ್ಯನಾಗಿ ಪಾಲಿಸುವೆ ॥ ಅನುಪಲ್ಲ ॥
ನಿನ್ನ ಮಧುರ ನಾಮ ಸುಜನ । ರನ್ನು ಧನ್ಯಗೊಳಿಸಿ ಸದಾ ।
ಮಾನ್ಯವಾದ ಮೋಕ್ಷಪದವಿ । ಯನ್ನು ಕೊಟ್ಟು ಸಲಹುತಿಹುದೋ ॥ ೧ ।

[ ಉತ್ತರೆಯು ಹೋಗಹತ್ತುವಳು. ಜಯದ್ರಥನು ಪ್ರವೇಶಿಸುತಿವನು ]

**ಜಯ** :— ನಿಲ್ಲು-ನಿಲ್ಲು-ಎಲ್ಲಿ ಹೋಗುವೆ ?

**ಉತ್ತರಾ** :— ಯಾರು—ಯಾರು ನೀನು ?

**ಜಯ** :— ನಾನು ಯಾರೆಂಬುದನ್ನು ವಿಚಾರಿಸುವಿಯಾ, ನಾನೇ ನಿನ್ನ ಪತಿಯನ್ನು ಸ್ವರ್ಗಕ್ಕೆ ಅಟ್ಟಿದವನು ! ನಿನಗಾದರೂ ಅದೇ ಮಾರ್ಗ ವನ್ನು ತೋರಿಸುವದಕ್ಕೆ ಬಂದಿರುವೆನು ! ( ಖಡ್ಗ ಹಿರಿಯುವನು )

**ಉತ್ತರಾ** :— ದುರಾತ್ಮಾ, ದೂರಾಗು, ಹೆಂಗಸಿನ ಮೇಲೆ ಶಸ್ತ್ರ ವೆತ್ತುವಂತಹ ಕೊಲೆಪಾತಕೀಯೇ ದೂರಾಗು.ಚಾಂಡಾಲಾ ನಿನ್ನಹೆಸರೇನು?

**ಜಯ** :— ನನ್ನ ಹೆಸರು ಕೇಳಿಕೊಂಡು ನೀನೇನು ಮಾಡುವೆ ? ಸದ್ಯಕ್ಕೆ ಈ ಪ್ರಪಂಚದೊಳಗಿಂದ ನಿನ್ನನ್ನು ನಷ್ಟಗೊಳಿಸುವದೇ, ನನ್ನ ಮುಖ್ಯ ಉದ್ದೇಶವಾಗಿದೆ. ಯಾವನ ಹೆಸರು ಕೇಳಿದ ಮಾತ್ರಕ್ಕೆ, ಅರ್ಜುನಾದಿ ಮಹಾ ವೀರರು ಗದಗದನೇ ನಡುಗುವರೊ, ಆತನೇ ನಾನು—ಸಿಂಧುರಾಜ ಜಯ ದ್ರಥನು !

**ಉತ್ತರಾ** :— ಯಾರು ನೀನು ? ಜಯದ್ರಥನೆ ? ಹೋಗು ಮೊದಲು! ನಿನ್ನ ಅಮಂಗಲ ಹೆಸರನ್ನು ನಾನು ಈ ಕಿವಿಗಳಿಂದ ಕೇಳಲಾರೆನು.

**ಜಯ** :— ಈತನು ಜಯದ್ರಥನಲ್ಲ ! ಪ್ರತ್ಯಕ್ಷ ಕೃತಾಂತನೆ ನಿನ್ನನ್ನು ಗ್ರಾಸಿಸುವದಕ್ಕೋಸ್ಕರ ರಾಕ್ಷಸೀ ಮಹತ್ವಾಕಾಂಕ್ಷೆಯಿಂದ ನಿನ್ನಮುಂದೆ ಬಂದು ನಿಂತಿರುವನು !

**ಉತ್ತರಾ** :— ದುಷ್ಟಾ, ಅಬಲೆಯಾದ ನನ್ನನ್ನು ಸಂಹರಿಸಿ, ಯಾವ ಘೋರ ನರಕಕ್ಕೆ ಸಾಧನಮಾಡಿಕೊಳ್ಳುವೆ.

**ಜಯ** :— ಶತ್ರುಗಳ ಸ್ತ್ರೀಯರನ್ನು ನಾನಾ ಪ್ರಕಾರವಾಗಿ ಪೀಡಿಸಿ, ಅವರನ್ನು ಸಂಹರಿಸುವದೇ ನಿಜವಾದ ವೀರರ ಬಿರುದು ! ಈ ಕಾಲಕ್ಕೆ ನಿನ್ನ ಸಹಾಯಕ್ಕೆ ಯಾರು ಬರುವರೋ ನೋಡುವೆನು.

**ಉತ್ತರಾ** :— ನನ್ನನ್ನು ರಕ್ಷಣೆ ಮಾಡುವವರು ಅನ್ಯರಾರು ? ನನ್ನ ಪುಣ್ಯದ ಪರಮೇಶ್ವರನೆ !

**ಜಯ** :— ಇದೋ ನೋಡು, ನಿನ್ನ ನಿರ್ಬಲವಾದ ಆ ಪರಮೇಶ್ವರ ನನ್ನು, ಒಂದೇ ಹೊಡೆತಕ್ಕೆ ಕತ್ತರಿಸಿ ಚೆಲ್ಲುವೆನು.

**ದ್ರೋಣ** :— **(ಪ್ರ)** ಸರಿ ಹಿಂವಕ್ಕೆ, ದುರಾಚಾರೀ ರಾಕ್ಷಸಾ ! ಸರಿ ಹಿಂವಕ್ಕೆ !

**ಜಯ** :-- ಯಾರು ! ಆಚಾರ್ಯರು--ಘಾತವಾಯಿತು—ಘಾತವಾಯಿತು.

**ದ್ರೋಣ** :-- ಧಿಃಕ್ಕಾರವಿರಲಿ ನಿನ್ನ ಪಾಪೀ ಪುರುಷಾರ್ಥಕ್ಕೆ ! ಸ್ತ್ರೀಘಾತಕೀಯೇ, ಉತ್ತರೆಯಂತಹ ಮಹಾಪತಿವ್ರತೆಯ ಯೋಗ್ಯತೆಯು ನಿನ್ನಂತಹ ನರಾಧಮರಿಗೆ ಹೇಗ ತಿಳಿದೀತು. ನಡೆ, ಈ ಶಾಪಭ್ರಷ್ಟ ದೇವತೆಯ ಕ್ಷಮೆಯನ್ನು ಬೇಡು; ಅಂದರೆ ನಿನ್ನ ಪಾಪವು ಕ್ಷಾಲನವಾಗುವದು. ಎಲೋ ! ಈ ಬಾಲವಿಧವೆಯ ಪವಿತ್ರಶೀಲದ ಪುಣ್ಯರಾಶಿಯ ಮುಂದೆ, ಮಹಾ ಮಹಾ ತಪಸ್ವಿಗಳು ಕೂಡ ಸುಮ್ಮನೇ ತಲೆಬಗ್ಗಿಸಬೇಕಾಗಿದೆ ! ಮರ್ಕಟಾ, ನಿನ್ನ ಪಾಡೇನು. ನಡೆ ಮೊದಲು ಕಾಲಿಗೆ ಎರಗಿ ಕ್ಷಮೆಯನ್ನು ಬೇಡು.

**ಉತ್ತರಾ** :-- ನನ್ನ ಕ್ಷಮೆಯೇತಕ್ಕೆ, ದಯಾಳುವಾದ ಭಗವಂತನೇ ಅವನನ್ನು ಕ್ಷಮಿಸಲಿ !

ರಾಗ ಭೈರವಿ, ತಾಳ ಕೇರವಾ

ಕರುಣಾಸಾಗರಾ ॥ ಪ್ರಭುಪರಮಾತ್ಮಾ ॥ ಪಲ್ಲ ॥
ಪೊರೆಯುವೆ ಸುಜನರ । ಮಂಗಲಧಾಮಾ ॥ ಅನುಪಲ್ಲ ॥
ದುರಿತವಿದೂರಾ ವಿಶ್ವಾಧಾರಾ । ಪರತರಪಾವನಾ ।
ನಿರಂಜನ ರೂಪಾ ॥ ೧ ॥

**ದ್ರೋಣ** :-- ದೇವತೆಯೇ—ದೇವತೆಯೇ (ಜಯದ್ರಥನನ್ನು ಕಾಲಿಗೆ ಬೀಳುವದಕ್ಕೆ ಹಚ್ಚುವನು.)

---

# ಮೂರನೆಯ ಪ್ರಸಂಗ

( ಮೇಘನಾದ ಹಾಗೂ ಅವನ ಗೆಳೆಯರು ಬರುವರು)

**ಮೇಘ** :— ಯಾಕೆ ನಾನು ಹೇಳಿದ್ದು ತಿಳಿಯಿತೇ, ಎಲೊ ನೀವು ನನ್ನ ಬಾಲ್ಯತನದ ಮಿತ್ರರೆಂದು, ಈ ಗುಟ್ಟಿನ ಕೆಲಸವನ್ನು ನಾನು, ನಿಮಗೆ ಹೇಳುತ್ತೇನೆ. ಅದೇನು ಅಷ್ಟು ಕಠಿಣ ಕೆಲಸವಲ್ಲ. ನೀವು ಸ್ವಲ್ಪ ಅತ್ತು, ನಾನು ಯುದ್ಧದಲ್ಲಿ ಮಡಿದೆನೆಂದು ಸುಳ್ಳು ಸುದ್ದಿಯನ್ನು, ನನ್ನ ಹೆಂಡತಿಗೆ

ತಿಳಿಸಿಬಿಟ್ಟರೆ, ಕೆಲಸವಾಯಿತು. ನಾನು ಈ ದಿವಸ ಅವಳ ಪರೀಕ್ಷೆ ತಕ್ಕೊಳ್ಳ ಬೇಕಾಗಿದೆ !

**೧ನೇ ಗೆ** :— ಅಂದರೆ ಈ ವರೆಗೂ ನಿನಗೆ, ನಿನ್ನ ಹೆಂಡತಿಯ ಪರೀಕ್ಷೆಯೇ ಆಗಿಲ್ಲವೇನು ?

**೨ನೇ ಗೆ** :— ಅಂದರೆ, ಈ ದಿವಸ ನೀನು, ನಿನ್ನ ಹೆಂಡತಿಯ ಪರೀಕ್ಷೆ ತಕ್ಕೊಳ್ಳತಕ್ಕವನೋ ಹೇಗೆ ?

**ಮೋಘ** :— ಮಿತ್ರರೇ ಹಾಗಲ್ಲ. ನಾನು ಸತ್ತಮೇಲೆ ಅವಳು ಸತಿ ಹೋಗುವೆನೆಂದು ವಚನಕೊಟ್ಟಿದ್ದಾಳೆ, ಹೇಳಿಕೇಳಿ ಅದು ಹೆಣ್ಣಿನ ವಚನ; ಅಂದಮೇಲೆ, ಅದರ ಮೇಲೆ ವಿಶ್ವಾಸವಿಡುವವನು ಮೂರ್ಖನೆ ! ಅಂತೆಯೇ ನಾನು ಈ ನಾಟಕವನ್ನು ಪ್ರಾರಂಭಿಸಿದುದು !

**೧ನೇ ಗೆ** :— ಛಿ-ನಮಗೆ ಬೇಡಪ್ಪಾ-ನಿನ್ನ ನಾಟಕವನ್ನು ನೀನೆ ಮುಗಿಸಿಕೋ.

**೨ನೇ ಗೆ** :— ನಮಗೆ ಇದು ಸಾಧ್ಯವಿಲ್ಲ. ಸುಮ್ಮನೆ ನಮಗೇತಕ್ಕೆ ಈ ಶುಕ್ಲಕಾಷ್ಟ !

**ಮೋಘ** :— ಹರ ಹರಾ-ನನ್ನ ಮೇಲೆ ಎಂತಹ ಭಯಂಕರ ಪ್ರಸಂಗ ವಿದು ! ಹೆಂಡತಿಯಿಂದ ಕೇವಲ ಗಂಡಾಂತರದಲ್ಲಿ ಮುಳುಗಿದ, ಈ ಅನಾಥ ಗೆಳೆಯನ ವಿಷಯವಾಗಿ ನಿಮಗೆ ದಯ ಹುಟ್ಟುವದಿಲ್ಲವೆ ? ನನ್ನ ನಾಟಕ ವನ್ನು ಈ ಸರ್ವ ಪ್ರಪಂಚವೆ ನೋಡುತ್ತಿರುವದು. ಈ ನಾಟಕದ ಕೊನೆಯ ಪ್ರವೇಶದಲ್ಲಿ ನಿಮ್ಮಿಂದ ನನಗೆ ಸ್ವಲ್ಪ ಸಹಾಯವಾಗಬಹುದೆಂದು, ನಿಮ್ಮನ್ನು ಕರೆತಂದೆನು. ಈ ದಿವಸ ನನ್ನ ಸಂಸಾರ ನಾಟಕದ ಕೊನೆಯಾಗುವದು, ಇಲ್ಲವೆ ಪ್ರಾರಂಭವಾಗುವದು. [ ಗೆಳೆಯರು ನಗುವರು ] ಹೂ, ಈ ಸಮಯದಲ್ಲಿ ನಗಬೇಡಿರಿ. ಅಳುವದಕ್ಕೆ ಬರುತ್ತಿದ್ದರೆ ಕೊಂಚ ಅತ್ತುತೋರಿಸಿರಿ.

**೧ನೇ ಗೆ** :— ಅಳಬೇಕೆ ? ಹೊಟ್ಟೆತುಂಬ ಅಳುವೆವು. ಅದರಲ್ಲೇನಿದೆ !

**೨ನೇ ಗೆ** :— ಶೂರ ಸಿಪಾಯಿಗಳಾದ ನಮಗೆ, ಅಳುವದಕ್ಕೆ ಬರುವ ದಿಲ್ಲ, ವೆನ್ನುವಿಯಾ ? ಕೇಳು ಹಾಗಾದರೆ— (ಅಳುವಂತೆ ನಟಿಸುವರು)

**ಮೋಘ** :— ಏ-ಏ ನೀವೇನು ಅಳುತ್ತಿರೋ ? ಅಥವಾ ಸಂಗೀತ ಕಚೇರಿಗೆ ಮಾಡುತ್ತಿರುವಿರೋ ? ತಡೆಯಿರಿ. ನಾನೇ ನಿಮಗೆ ಕಲಿಸುತ್ತೇನೆ.

**೧ನೇ ಗೆ** .—- ನಮಗೆಬೇಡಪ್ಪಾ ಈ ಅಳುವಕಲೆ.ಅದು ನಿನಗೇಇರಲಿ?

**೨ನೇ ಗೆ** :—- ಸುಖದ ಜೀವಕ್ಕೆ ಬೇಕು—ಬೇಕಾಗಿ, ಅಳುವ ಕಲೆ ಯನ್ನು ನಿನ್ನಿಂದ ಕಲೆಯಬೇಕೆ ?

**ಮೇಘ** ಃ— ಎಲೋ ಮೂಲತಃ ಹುಟ್ಟುವಾಗಲೇ, ನಾನು ಅಳುತ್ತ ಹುಟ್ಟಿದ್ದೇನೆ.

**೧ನೇ ಗೆ** :— ಒಳ್ಳೇದು ನಡೆ ! ನಾವಾದರೂ ನಿನ್ನ ನಾಟಕವನ್ನು ಅಳುತ್ತಲೇ ಪೂರೈಸುವಾ.

**೨ನೇ ಗೆ** .— ಅದೇನು ನಮಗೆ ಅಸಾಧ್ಯವಾದ ಮಾತಲ್ಲ. ನಡೆ ಹೋಗುವಾ

**ಮೇಘ** :-- ಅಳುವದಕ್ಕೆ ಬಾರದವರು, ನಾಟಕ ಮಾಡುತ್ತಾರಂತೆ !

**೨ನೇ ಗೆ** :-- ಮಾತು ಸಾಕುಮಾಡು. ಅದೋ ನಿನ್ನ ಹೆಂಡತಿಯೇ ಇಲ್ಲಿ ಬಂದಳು.

**ಮೇಘ** ಃ— ಇದೊ, ನಾನು ಅತ್ತ ಕಡೆಗೆ ಆ ಮರದ ಆಚೆಗೆ ಸತ್ತವ ನಂತೆ ಬೀಳುವೆನು; ನೀವು ಇತ್ತ ಕಡೆಗೇ ಒಂದೇಸವನೆ ಉಚ್ಚಸ್ವರದಲ್ಲಿ ಅಳುವ ದಕ್ಕೆ ಸುರುವುಮಾಡಿರಿ. ಹೂ : ಬೇಗನೇ ಪ್ರಾರಂಭವಾಗಲಿ ಒಂದು—ಎರಡು ಮೂರು ( ಹೋಗುವನು, ದೊಡ್ಡ ಧ್ವನಿಯಿಂದ ಅಳುವರು)

**ಸೌದಾ** :— (ಸ್ವ) ಯಾರಿವರು ! ಪಾಪ ಯಾಕೆ ಅಳುತ್ತಿರುವರು ? ನನ್ನನ್ನು ನೋಡಿದ ಕೂಡಲೆ, ಇವರ ಶೋಕವು ಇಮ್ಮಡಿಸಿತು. (ಸಮೀಪಕ್ಕೆ ಹೋಗಿ) ತಂಡೆಗಳಿರಾ ಯಾಕೆ ಅಳುವಿರಿ-ಯಾಕೆ ?

**೧ನೇ ಗೆ** ಃ— (ಅಳುತ್ತ) ತಾಯಿ ಏನು ಹೇಳಲಿ, ನಮ್ಮ ಪರಮ ಮಿತ್ರನು ನಮ್ಮನ್ನು ಬಿಟ್ಟು ಹೋದನು.

**೨ನೇ ಗೆ** :—ಈ ದಿವಸ ಯುದ್ಧದಲ್ಲಿ ಮಡಿದನು.(ಅಳುವಂತೆನಟಿಸುವನು)

**ಸೌದಾ** ಃ— ಯಾರು ? ಯಾರು ನಿಮ್ಮ ಮಿತ್ರನು ?

**೧ನೇ ಗೆ** :— ಎರಡನೆಯವರಾರು ? ನಮ್ಮ ಮೇಘನಾದನು.

**ಸೌದಾ** :— ಏನು ಹೇಳುವಿರಿ ! ಅವರು ನಿಜವಾಗಿಯೂ ಯುದ್ಧ ಮಾಡುತ್ತ ಮಾಡುತ್ತ ಸತ್ತು ಹೋದರೆ ?

**೧ನೇ ಗೆ** ಃ— ಹೌದಮ್ಮಾ , ಅತ್ತಕಡೆಗೆ ಅವನು ಯುದ್ಧ ಮಾಡುತ್ತ ಮಾಡುತ್ತ ಸತ್ತು ಹೋದನು.

೨ನೇ ಗೆ :— ಇತ್ತ ಕಡೆಗೆ ನಾವು ಆತ್ತು-ಅತ್ತು-ಸಾಯಬೇಕಾಗಿವೆ!

ಸೌದಾ :— ಅವರ ಪ್ರೇತವು ಎಲ್ಲಿದೆ?

೧ನೇ ಗೆ :— ಅದೋ ನೋಡಿ, ಆ ಪುರಕ್ಕೆ ಉದ್ದವಾಗಿ ನಿಲ್ಲಿಸಿದ್ದೇವೆ.

೨ನೇ ಗೆ :— ನೀವೇಕೆ ಭಯಪಟ್ಟಿದ್ದೀರಿ? ಅವನಿಗೂ ನಿಮಗೂ ಏನು ಸಂಬಂಧ?

ಸೌದಾ :— ನಾನು ಅವರ ಹೆಂಡತಿಯು. ಅವರನ್ನು ತೋರಿಸಿರಿ.

೧ನೇ ಗೆ :— ಎಲ—ಎಲಾ ಎಂಥ ಘೋರ ಪ್ರಸಂಗವಿದು.

೨ನೇ ಗೆ :— ತಡೆಯಿರಿ. ನಾವೆ ಇಲ್ಲಿಗೆ ಪ್ರೇತವನ್ನು ತರುತ್ತೇವೆ. ನಡೆ ಹೋಗೋಣ.

೧ನೇ ಗೆ :— ಎಲೋ ಅಲ್ಲಿಗೇತಕ್ಕೆ ಹೋಗುವಿ? ಇಲ್ಲಿಂದಲೆ ಆ ಪ್ರೇತವನ್ನು ಕೂಗು. ಏ ಮೇಘನಾದನ ಪ್ರೇತವೇ ಬಾರಯ್ಯಾ ಹೀಗೆ.

೨ನೇ ಗೆ :— ಎಲೋ ಮೂರ್ಖಾ, ನೀನು ಮನುಷ್ಯನೋ-ಎಮ್ಮೆ ತಮ್ಮನೋ?

೧ನೇ ಗೆ :— ಅದೇಕೆ?

೨ನೇ ಗೆ :— ಮೂರ್ಖಾ ಸತ್ತಂಥ ಪ್ರೇತವು ನಡೆಯುತ್ತ ಬರುವದೆ?

( ಇಬ್ಬರೂ ನಗುವರು )

ಸೌದಾ :— (ಸ್ವ) ಇದೇನು? ಈ ಒರೆಗೆ ಅಳುತ್ತಿದ್ದರು. ಈಗ ನಗ ಹತ್ತಿದರು ಇವರು ಹುಚ್ಚರೊ ಏನೋ (ವಿಚಾರಮಾಡಿ) ಓಹೊ ಈಗ ತಿಳಿ ಯಿತು. ಇದೆಲ್ಲ ಕುಚೇಷ್ಟೆಯು ನಮ್ಮ ಪತಿರಾಜರದೇ ಇರಬಹುದು. (ಮೇಘ ನಾದನನ್ನು ಹೊತ್ತು ತರುವನು.) ಸಂಶಯ ಬೇಡಾ. ಇವರ ಈ ನಗು ಮುಖ ವನ್ನು ನೋಡಿದರೆ, ಪ್ರೇತವೆಂದು ಯಾರಿಗೆನಿನಬಹುದು? (ವಿಚಾರಮಾಡಿ) ಹೀಗೇ ಮಾಡಿದರೆ, ಇವರ ವೇಷವು ಹೊರಬೀಳುವದು!

೧ನೇ ಗೆ :— ಅಮ್ಮಾ ಇದೋ ನೋಡಿ ಪ್ರೇತವು,

೨ನೇ ಗೆ :— ಅಮ್ಮಾ ನಿಮಗೆ ಏನೂ ದುಃಖವಾಗುವದಿಲ್ಲವೆ?

ಸೌದಾ :— ನನಗಾಗುವದನ್ನು ನಿಮಗೆ ಹೇಗೆ ಹೇಳಲಿ?

೧ನೇ ಗೆ :— ಇರಲಿ ಇನ್ನು ಮುಂದಿನ ಇದರ ವ್ಯವಸ್ಥೆ?

೨ನೇ ಗೆ :— ಹಾಗೆಯೇ ತಮ್ಮ ವ್ಯವಸ್ಥೆ ಏನು? ಸತ್ತವರ ಕೂಡ

ಯಾರು ತಾನೆ ಸಾಯುವರು? ನೀವು ಸತಿ ಹೋಗತಕ್ಕವರಲ್ಲವೆ? ಹಾಗೆ ನೀವು ವಚನಕೊಟ್ಟು ಪ್ರಮಾಣಮಾಡಿರುವಿರಿ!

**ಸೌದಾ** :— ಯಾರು ಹೇಳುವರು? ಸಾಯುವಾಗ್ಗೆ ಇವರೇ ನಿಮಗೆ ಹೇಳಿದರೆ?

**೧ನೇ ಗೆ** :— ಹೌದು (ಹೆಣದಕಡೆ ಕೈ ಮಾಡಿ) ಇವನನ್ನೇ ವಿಚಾರಿಸಿ. ಮನದಟ್ಟು ಮಾಡಿಕೊಳ್ಳಿ! ಯಾಕೋ ಮೇಘನಾದಾ—

**೨ನೇ ಗೆ** :—ಎಲೋ ಹುಚ್ಚಾ ಅವನನ್ನೇನು ಕೇಳುವಿ? ಮಾತಾಡುವದಕ್ಕೆ ಅವನಿಗೆ ಬಾಯಿ ಇರುವದೆ?

**ಮೇಘ** :—(ಒಂದು ಮಗ್ಗಲಿಗೆ) ಕತ್ತೆಗಳೇ ನಿಮ್ಮ ನಿಮ್ಮೊಳಗೆ ಕುಚೇಷ್ಟ ಮಾಡುವಿರಾ?

**೧ನೇ ಗೆ** :— ಎಲೋ (ಹೆಣದ ಕಡೆ ಕೈ ಮಾಡಿ) ಕಣ್ಣು ತೆರೆದು ನೋಡ ಬೇಡ.

**೨ನೇ ಗೆ** :— ಹೌದು ಈ ದಿವಸ ಈತನ ಕಣ್ಣುಗಳು ತೆರೆದಂತೆ ಕಾಣುತ್ತವೆ.

**ಸೌದಾ** :— ಯಾಕೆ—ಏನದು—ಕಿವಿಮಾತುಗಳು? ನಾನು ಸತಿ ಹೋಗುವದಿಲ್ಲ! ನಿಮಗೆ ಬೇಕಾದ ಹಾಗೆ ಅವರ ವ್ಯವಸ್ಥೆ ಮಾಡಿರಿ!

**ಮೇಘ** :— (ಒಂದು ಮಗ್ಗಲಿಗೆ) ಎಲಾ ಶಟವಿಯೇ! ಸತಿಹೋಗುವದಿಲ್ಲವೆ!

**೧ನೇ ಗೆ** :— ಈತನಮೇಲೆ ನಿಮ್ಮ ಪ್ರೇಮವಿತ್ತಲ್ಲವೆ?

**೨ನೇ ಗೆ** :— ಎಲೋ ಇನ್ನುಮೇಲೆ ಪ್ರೇಮದ ಮಾತುಗಳನ್ನಾಡುವದರಲ್ಲಿ, ಏನು ಅರ್ಥವಿದೆ? ಅಮ್ಮಾ—

**ಸೌದಾ** :— (ಬೇಸರಗೊಂಡು) ಏನನ್ನುವಿರಿ? ನಿಮಗೆ ಬೇಕಾದ ವ್ಯವಸೆಯನ್ನು ಮಾಡಿಕೊಳ್ಳಿ! ನನ್ನನ್ನು ವಿಚಾರಿಸಬೇಡಿರಿ. ಇದು ನಿಜವಾಗಿಯೂ ಜೀವವಿಲ್ಲದ ಪ್ರೇತವೇ?

**೧ನೇ ಗೆ** :— ಅಂದರೆ, ಪ್ರೇತಕ್ಕೆ ಜೀವವಿರುವದುಂಟೆ?

**ಮೇಘ** :— (ಮಗ್ಗಲಿಗೆ) ಹೀಗೇಕೆ ನಗುತ್ತಿರುವಿರಿ! ಅತ್ತು ತೋರಿಸಿರಿ ನಿಮ್ಮ ಪರಾಕ್ರಮ! ಕಿಸಿಕಿಸಿ ಹಲ್ಲು ಕಿಸಿದು, ನನ್ನ ತಕ್ಕುತನವನ್ನು

ಬೈಲಿಗೆ ಹಾಕಿದಿರಿ ಏನು ಮಾಡಲಿ- ಇವನ ಕಿವಿಗೆ ಒಂದು ಸಿಟಿ ಹಾಕಲಿ !

**ಸೌದಾ** :— ತಿಳಿಯಿತು ನನಗೆಲ್ಲಾ ತಿಳಿಯಿತು. ಇನ್ನುಮೇಲೆ ನೀವು ಬೇಕಾದದ್ದು ಮಾಡಿರಿ. ನಾನು ಹೋಗುವೆನು. (ಹೋಗಹತ್ತುವಳು)

**ಮೋಘ** :— ಇನ್ನುಮೇಲೆ ಮಾತ್ರ ನನಗೆ ಮರಣವೇ ಬಂದಿತು ! (ಅವಳನ್ನು ಹಿಡಿದು) ಏನೇ ನಾನು ಇಲ್ಲಿ ಸತ್ತುಬಿದ್ದಿರುವಾಗ, ನೀನು ನನ್ನನ್ನು ಬಿಟ್ಟು ಹೊರಟೆ ! ಇದೇ ಏನು ನಿನ್ನ ಸತಿ ಹೋಗೋಣ !

**ಸೌದಾ** :— ಅದನ್ನೇನು ವಿಚಾರಿಸುವಿರಿ—ಹೇಗೆ ನಿಮ್ಮ ಮರಣವೋ, ಹಾಗೆ ನನ್ನ ಸತಿ ಹೋಗೋಣ ! ನಿಮಗೂ ನಾಚಿಕೆಯಿಲ್ಲ. ಮತ್ತು ನಿಮ್ಮ ಸಹಾಯಕರಾದ ಈ ಮುರ್ಖರಿಗೂ ನಾಚಿಕೆ ಇಲ್ಲ.

**೧ನೇ ಗೆ** :— ಎಲೋ ಇನ್ನುಮೇಲೆ ಇಲ್ಲಿಂದ ಬೇಗನೆ ಓಡಬೇಕು, ಇಲ್ಲವಾದರೆ ಪ್ರಾಣಕ್ಕೇ ಪ್ರಸಂಗ ಬಂದೀತು. ಓಡು, ಓಡು (ಹೋಗುವರು)

**ಸೌದಾ** : -- ಯಾಕೆ, ನಾನು ಹೇಳಿದ್ದು ಕೇಳಿಸಿತೇ ? ಹೇಗೆ ನಿಮ್ಮ ಮರಣವೋ, ಹಾಗೆ ನನ್ನ ಸತಿ ಹೋಗೋಣ !

**ಮೋಘ** .— ಇವಳಂತೂ ನನ್ನ ಬಿಟ್ಟು ನನ್ನ ಕೈಯಲ್ಲಿನಿಂದ ಜಿಂಕ್ಕಿದಳು. ಹೆಂಗಸರು ಜಾಣರು, ಅವರ ಮುಂದೆ ನನ್ನ ಯೋಗ್ಯತನ ನಡೆಯುವುದು, ತೀರ ಅಸಾಧ್ಯ !

**ಸೌದಾ** : – ಯಾಕೆ, ಮಾತಾಡುವುದಿಲ್ಲ ? ಆಯಿತೆ ನಿಮ್ಮ ಸ್ಥಾನ ನಾಶವು ?

**ಮೋಘ** :— ಹೆಂಡತಿಯೇ, ನಾನು ನಿನಗೆ ಅನನ್ಯಭಾವದಿಂದ ಶರಣು ಬಂದಿರುವೆನು. ಪರಾಜಿತನಾಗಿ, ಶರಣುಬಂದ ಈ ವೀರನಿಗೆ ಅಭಯದಾನವನ್ನೀಡು. (ಕಾಲು ಹಿಡಿಯುವನು)

**ಸೌದಾ** :— ಮೇಲಕ್ಕೇಳಿ, ಯಾರಾದರೂ ನೋಡಿದರೆ ಏನಂದಾರು ?

**ಮೋಘ** :— ಯಾರು ಏನನ್ನುವರು ? ನಾನು ಪ್ರತಿಜ್ಞೆಮಾಡಿ ಹೇಳುವುದೇನಂದರೆ, ಈ ಸಂಸಾರದಲ್ಲಿ ಪ್ರತಿಯೊಬ್ಬನಿಗೆ, ಹೆಜ್ಜೆ ಹೆಜ್ಜೆಗೆ ತನ್ನ ಹೆಂಡತಿಯ ಕಾಲು ಹಿಡಿಯುವ ಪ್ರಸಂಗವು ಬಂದೇ ಬರುವುದು !

**ಸೌದಾ** :— ಇಂದಿನಿಂದ ನೀವು ನನ್ನ ಆಜ್ಞೆಯಂತೆ ನಡೆಯುವಿರಲ್ಲವೆ?

**ಮೋಘ** :— ಸಂದೇಹವೇನು ? ನನ್ನಂಥ ಬಂಭ ಪತಿಗಳು, ನಿನ್ನಂಥ ಚುರುಕು ಹೆಂಡತಿಯ ಆಜ್ಞೆಯಲ್ಲಿರುವುದೇ ಶ್ರೇಯಸ್ಕರವು !

**ಸೌದಾ :**— ಈ ದೀನ ದಾಸಿಯ ಮೇಲೆ ಇದೇ ರೀತಿ ಪ್ರೇಮವಿರಲಿ.

**ಸೌದಾಮಿನಿ :**—

ಮಮ ಪ್ರಾಣೇಶ್ವರಾ । ತವ ಪ್ರಿಯಸಖಿಯ ದಯದೆ ಮನ್ನಿಸು ॥ ಪ ॥

**ಮೇಘನಾದ :**—

ಮಮ ಪ್ರಾಣೇಶ್ವರೀ । ಎನಗಿಂದೂ । ಸುಖದ ಪಥವ
ತೋರಿಸೂ ॥ ಅನುಪಲ್ಲ ॥

**ಸೌದಾಮಿನಿ :**—

ಇದುವೆ ಭಾಗ್ಯವೆ ಅದುವೆ ಸುದಿನವೆ ॥

**ಮೇಘನಾದ :**—

ಮುದವ ಪೊಂದಿದೆ । ಮಧುರ ವಚನದೆ ॥

**ಸೌದಾಮಿನಿ :**—

ಧನ್ಯಗೊಳಿಸಿರಿ । ದೀನದಾಸಿಯ ॥

**ಮೇಘನಾದ :**—

ನಿನ್ನ ವಚನವದು । ಮಾನ್ಯವೆನಗೆ ॥

# ನಾಲ್ಕನೆಯ ಪ್ರಸಂಗ

[ ಅರ್ಜುನನ ಅಗ್ನಿಪ್ರವೇಶದ ಸಿದ್ಧತೆಯು ನಡೆದಿದೆ ]

ರಾಗ ಶ್ರೀ. ತಾಳ ಝಂಪಾ

ಅಪಶಯಕೆ ಗುರಿಯಾದೆ । ಸುಫಲಗತಿಯ ಕಾಣೆ ।
ಪಾಪಿ ವಿಧಿಯು ಮೋಸ । ಗೈದುದಕಟಾ ॥ ಪಲ್ಲ ॥
ದಿನಪ ನಿರ್ದಯದೆ । ಪೋಪನತಿ ತ್ವರಿತದೆ ।
ಅರಿಯುತಾ ಕಣ್ಮರೆಯಾದನಕಟಾ ॥ ೧ ॥

**ಅರ್ಜುನ :**— ಹಾಯ ದುರ್ದೈವವೇ, ಈ ದಿವಸ ನನ್ನ ಪ್ರತಿಜ್ಞೆಯು ಭಂಗವಾಗುವ ಚಿನ್ಹವು ತೋರುವದು. ಸೂರ್ಯಾಸ್ತವಾಗುವುದಕ್ಕೆ ಒಂದು ಗಳಿಗೆ ಕೂಡ ಉಳಿಯಲಿಲ್ಲ. ಈ ಅರ್ಜುನನ ಶೌರ್ಯಕ್ಕೂ, ನಿರ್ಬಲವಾದ ಪೌರುಷಕ್ಕೂ, ಧಿಃಕ್ಕಾರ—ಧಿಃಕ್ಕಾರ ವಿರಲಿ! ಎಲೈ, ಗಾಂಡೀವ ಧನುಷ್ಯವೇ ನಿನ್ನ ಭಾರವಾದರೂ ನನಗೇಕೆ ಬೇಕು? ಪ್ರತಿಜ್ಞಾಭಂಗದ, ನಿಷ್ಠುರ ಪ್ರಹಾರ ದಿಂದ, ನನ್ನ ಹೃದಯವು ಚೂರು ಚೂರಾಯಿತು; ಅದರಂತೆ ನಿನ್ನನ್ನು ತುಂಡ

ತುಂಡುಮಾಡಿ— (ಧನುಷ್ಯವನ್ನು ಮುರಿಯುತೊಡಗುವನು. ಶ್ರೀಕೃಷ್ಣ ಸೋದರಾದವರು ಬರುವರು.)

**ಶ್ರೀಕೃಷ್ಣ** :— ತಾಳು—ತಾಳು—ಅರ್ಜುನಾ, ಇದೆಂತಹ ಅವಿಚಾರವನ್ನು ಮಾಡುವೆ ?

**ಅರ್ಜುನ** :— ಕೃಷ್ಣಾ ಇದು ಅವಿಚಾರವಲ್ಲ; ಎಲ್ಲವಿಚಾರಗಳಲ್ಲಿಯೂ ಶ್ರೇಷ್ಠ ವಿಚಾರವಿದು !

**ಶ್ರೀಕೃಷ್ಣ** :— ಧನುರ್ಧಾರಿ ವೀರಶ್ರೇಷ್ಠಾ—

**ಅರ್ಜುನ** :— ಬೇಡ—ಬೇಡ—ಶ್ರೀಕೃಷ್ಣಾ, ಈ ಸಂಬೋಧನಕ್ಕೆ ಈ ದುರ್ಬಲನಾದ ಅರ್ಜುನನು ಸರ್ವಥಾ ಪಾತ್ರನಲ್ಲ. ‘ ಧನುರ್ಧಾರಿ ವೀರ ಶ್ರೇಷ್ಠ ’ ಈ ವಿಶೇಷಣಕ್ಕೆ ಈ ನಿರ್ಭಾಗ್ಯನಾದ ಅರ್ಜುನನು ತೀರ ಅಯೋಗ್ಯನು ! ಸೂರ್ಯಾಸ್ತ ಸಮಯವು ತೀರಾ ಸಮೀಪಿಸಿತು ! ಪ್ರತಿಜ್ಞೆಯ ಆಶೆಯು ಸೂರ್ಯನ ಜೊತೆಯಲ್ಲಿಯೇ ಅಸ್ತಮಾಗುತ್ತಾ ನಡೆಯಿತು ಈ ಗಾಂಡೀವದ ಪೊಳ್ಳು ಅಹಂಕಾರವು ನನಗೆ ಇನ್ನೇತಕ್ಕೆ ಬೇಕು !

**ಶ್ರೀಕೃಷ್ಣ** :— ಅರ್ಜುನಾ, ಸೂರ್ಯಾಸ್ತಕ್ಕೆ ಇನ್ನೂ ಒಂದು ಗಳಿಗೆ ಅವಕಾಶವಿದೆ. ಇನ್ನುಮೇಲಾದರೂ ಜಯದ್ರಥನು ದೃಷ್ಟಿಗೆ ಬಿದ್ದು, ನಿನ್ನ ಕಾರ್ಯಭಾಗವು ಪೂರ್ಣವಾಗಬಹುದು. ಮುಂದಿನ ಭವಿಷ್ಯವನ್ನು ಕಂಡವರಾರು?

**ಅರ್ಜುನ** :— ಪ್ರತಿಜ್ಞೆಯು ಕೊನೆಮುಟ್ಟುವದಂತೂ ಅಶಕ್ಯವೇ ; ಆದರೆ ನನ್ನ ಆಯುಷ್ಯದ ಕೊನೆಯು ಮಾತ್ರ ಸಮೀಪಿಸುತ್ತಿರುವದು. ಅದೋ ನೋಡು ! ರವಿಯು ಮುಳುಗಹತ್ತಿದನು. ದೇವಾ- ಈಗ ನಾನೇನುಮಾಡಲಿ?

**ಶ್ರೀಕೃಷ್ಣ** :— (ಸ್ವ) ಪ್ರಸಂಗವಂತೂ ಬಂದೊದಗಿತು. ಇನ್ನುಮೇಲೆ ಪ್ರಿಯ, ಭಕ್ತನನ್ನು ರಕ್ಷಿಸಲೇ ಬೇಕು ? ಸುದರ್ಶನಾ, ವೇಗದಿಂದ ಹೋಗಿ, ಸೂರ್ಯಮಂಡಲವನ್ನು ಸಂಪೂರ್ಣವಾಗಿ ಮುಚ್ಚಿಬಿಡು.

**ಅರ್ಜುನ** :— ಹಾಯ್ ದೈವವೇ ಇದೋ ಸೂರ್ಯಾಸ್ತವಾಯಿತು ! ನನ್ನ ಆಯುಷ್ಯವು ಮುಗಿಯಿತು !

**ಧರ್ಮ** :— ಶ್ರೀಕೃಷ್ಣಾ, ಈ ಸಮಯದಲ್ಲಿ ನಮ್ಮನ್ನು—ರಕ್ಷಿಸುವವರು ನೀನಲ್ಲದೆ ಮತ್ತಾರು ?

**ಶ್ರೀಕೃಷ್ಣ** :— ಸೃಷ್ಟಿಯ ನಿಯಮದ ಮುಂದೆ ನನ್ನದಾವದೂ ಉಪಾಯವೆನಿದೆ !

**ಭೀಮ** :— ಈ ದಿವಸ ಸೂರ್ಯನು ಅಸ್ತಂಗತನಾಗುವದಕ್ಕೆ ಇಷ್ಟೇಕೆ ಅವಸರ ಮಾಡಿದನು? ಶ್ರೀಕೃಷ್ಣಾ— ನಾನು ನಿಶ್ಚಯವಾಗಿ ಹೇಳುತ್ತೇನೆ; ಈ ದಿವಸ ಸೂರ್ಯನು ನಿತ್ಯದಕ್ಕಿಂತಲೂ ಬಹಳ ಬೇಗನೆ ಅಸ್ತಂಗತನಾದನು.

**ಶ್ರೀಕೃಷ್ಣ** :— ಪಾಪ ಬೆಳಗಿನಿಂದಲೂ ಸಂಚಾರ ಮಾಡಿ ಮಾಡಿ ದಣಿದಿದ್ದಾನೆ; ಏನೋ ಮನಸ್ಸಿಗೆ ಬಂತು, ಬೇಗನೆ ಮರೆಯಾಗಿ ಹೋದನು. ಅಲ್ಲದೇ ಮತ್ತೇನು ?

**ಸರ್ವ** :— ಮುಳುಗಿದನು—ಮುಳುಗಿದನು—ಸೂರ್ಯನು ಸಂಪೂರ್ಣ ವಾಗಿ ಮುಳುಗಿದನು. ನಮ್ಮ ಉಲ್ಲಾಸವಾದರೂ ಅವನ ಜೊತೆಯಲ್ಲಿಯೇ ಮುಳುಗಿಹೋಯಿತು ! ( ಒಳಗೆ—ಜಯದ್ರಥ :— ಸೂರ್ಯನು ಮುಳುಗಿದನು ! ಇನ್ನು ಮೇಲೆ ಹೊಟ್ಟೆತುಂಬ ಶೋಕಿಸಿರಿ !)

**ಅರ್ಜುನ** :— ಯಾವದೀ ಧ್ವನಿಯು ! (ನೋಡಿ) ಯಾರು ಜಯ ದ್ರಥನೇ ! ಸೂರ್ಯನು ಮುಳುಗಿ, ಪ್ರತಿಜ್ಞೆಯ ಸಮಯವು ಮೀರಿದಕೂಡಲೇ, ನನ್ನ ವೈರಿಯು ಈಗ ಉದಯವಾದನೇ—

**ಶ್ರೀಕೃಷ್ಣ** :— ಆ ಧ್ವನಿಯು ಜಯದ್ರಥನದಾಗಿರಲಾರದು. ಸೂರ್ಯನು ಮುಳುಗಿದನೆಂದು, ಯಾವುದೊ ಒಂದು ಗೂಗೆ—ಕೂಗುತ್ತಿರಬಹುದು.

**ಜಯ** :— (ಪ್ರವೇಶಿಸಿ) ಸೂರ್ಯನು ಮುಳುಗಿದನು. ಇನ್ನುಮೇಲೆ ನೀನು ಸ್ವಸಂತೋಷದಿಂದ ಮರಣಕ್ಕೆ ಸಿದ್ಧನಾಗು ! ಈ ವೀರನು ಈ ಸಮಯ ದಲ್ಲಿ, ನಿನ್ನ ಮುಂದೇ ಏನೂ ಭಯವಿಲ್ಲದೆ ನಿಂತಿರುವವನ್ನು ನೋಡು !

**ಅರ್ಜುನ** :— ದುರಾತ್ಮಾ , ದಿವಾಭೀತಾ, ಇಷ್ಟು ಹೊತ್ತಿನವರೆಗೆ, ಯಾವ ನರಕದಲ್ಲಿ ಮರೆಯಾಗಿದ್ದೆ !

**ಜಯ** :— ಸುಮ್ಮನೆ ಏತಕ್ಕೆ ಕಂಠಶೋಷ ಮಾಡಿಕೊಳ್ಳುವೆ? ನನ್ನನ್ನು ಸಂಹರಿಸುವ ಪ್ರತಿಜ್ಞೆಯಂತೂ ನಿನ್ನಿಂದ ಪೂರ್ಣವಾಗಲಿಲ್ಲ; ಇನ್ನು ಸ್ವತಃದ ಮರಣ ಪ್ರತಿಜ್ಞೆಯನ್ನಾದರೂ ಪೂರ್ಣಗೊಳಿಸು ! ಅಷ್ಟೇ ಸಾಕು !

**ಅರ್ಜುನ** :— ದುಷ್ಟಾ, ಮೊದಲು ನಿನ್ನನ್ನು ಸಂಹರಿಸಿ ಆಮೇಲೆ ನಾನು

**ಶ್ರೀಕೃಷ್ಣ** :— ಅರ್ಜುನಾ, ಸೂರ್ಯನು ಮುಳುಗಿರುವನು. ಅಧರ್ಮ ವನ್ನು ಮಾಡಿ, ಜಯದ್ರಥನನ್ನು ಸಂಹರಿಸಿದರೆ ಪಾಪಕ್ಕೆ ಗುರಿಯಾಗುವೆ ! ನೀಗಲಾರದ ಪ್ರತಿಜ್ಞೆ ಮಾಡಬೇಡವೆಂದು ನಾನು ನಿನಗೆ ಮೊದಲೆ ಸಾರಿ ಸಾರಿ ಹೇಳಿದರೂ, ಕೋಪದ ಭರದಲ್ಲಿ ಪಂಥ ಮಾಡಿದ್ದೇ ತಪ್ಪು ! ಮನುಷ್ಯನ ವಿನಾಕಾರಣ ತನಗೆ ಅಸಾಧ್ಯವಾದ ಪ್ರತಿಜ್ಞೆ ಮಾಡಿ, ಸಂಕಟಕ್ಕೆ ಗುರಿಯಾಗ ದಿರುವುದೇ ಒಳ್ಳೇದು !

**ಅರ್ಜುನ** :— ಹಾಯ್—ಹಾಯ್— ಒಳ್ಳೇ ಸಮಯಕ್ಕೆ, ನನ್ನ ಪ್ರತಿಜ್ಞೆಯೇ ನನ್ನನ್ನು ಪ್ರಾಣಸಂಕಟಕ್ಕೆ ಗುರಿಮಾಡಿತೇ !

**ಜಯ** :— ಸುಮ್ಮನೆ ಏತಕ್ಕೆ ಪಶ್ಚಾತ್ತಾಪ ಪಡುವೆ ! ನಿನ್ನ ಅಪೇಕ್ಷೆಯೇ ಇದ್ದರೆ ಬಾ, ಯುದ್ಧಕ್ಕೆ ಸಿದ್ಧನಾಗು ನೋಡುವಾ, ನಿನ್ನ ಧರ್ಮಯುದ್ಧದ ಪರಾಕ್ರಮ !

**ಭೀಮ** :— ನಿನ್ನಂತಹ ಅತ್ಯಾಚಾರಿಯಾದ ದುರಾತ್ಮನನ್ನು ಸಂಹರಿಸುವದಕ್ಕೆ, ಧರ್ಮಯುದ್ಧದ ನಿರ್ಬಂಧವೇತಕ್ಕೆ ! ಬಾ ಮುಂದಕ್ಕೆ, ನಿನ್ನೊಡನೆ ಯುದ್ಧಮಾಡಿ, ರಸಾತಳಕ್ಕೆ ತುಳಿಯುವುದಕ್ಕೆ ಈ ಭೀಮನು ಸಿದ್ಧನಾಗಿರುವನು. ಈ ಗದೆಯು ಒಂದೇ ಪ್ರಹಾರದಿಂದ ನಿನ್ನ ದೇಹವನ್ನು ಭೂಮಿಗೇ ಅಪ್ಪಳಿಸುವೆನು. (ದುರ್ಯೋಧನ ದುಶ್ಯಾಸನರು ಬರುವರು)

**ದುರ್ಯೋ** :— ಭೀಮಾ, ಸಾಕುಮಾಡು ನಿನ್ನ ಪರಾಕ್ರಮ ! ಜಯದ್ರಥನ ಸಂರಕ್ಷಣಕ್ಕೋಸ್ಕರ ಈ ದುರ್ಯೋಧನನು ನಡುಕಟ್ಟಿ ಸಿದ್ಧನಾಗಿದ್ದಾನೆ ಅವನ ದೇಹಕ್ಕೆ ಪೆಟ್ಟು ತಗಲಿದರೆ, ಬಹಳ ಅನರ್ಥವಾದೀತು !

**ಭೀಮ** :— ಹಾಗಾದರೆ ಇದೋ ನೋಡು ನರಾಧಮಾ, ಈ ಗದಾ ಪ್ರಹಾರದಿಂದ ನಿನ್ನನ್ನೇ ಯಮಸದನಕ್ಕೆ ಅಟ್ಟುವೆನು.

**ಧರ್ಮ** :— ಹಾ—ಭೀಮಾ, ಶಾಂತನಾಗು. ಇದು ಧರ್ಮಯುದ್ಧವಲ್ಲ; ಮತ್ತು ನಿನ್ನ ಕೋಪಕ್ಕೆ ಇದು ಸಮಯವಲ್ಲ.

**ಜಯ** :— ಯಾಕೆ ಅರ್ಜುನಾ, ಈಗ ಕೂಡಾ ನಾನು ನಿನ್ನನ್ನು — ಯುದ್ಧಕ್ಕೆ ಆಹ್ವಾನಿಸುವೆನು. ಧರ್ಮದ ಹುಚ್ಚುತನಕ್ಕೆ ಗುರಿಯಾಗಿ, ಹೇಡಿಯಾಗಬೇಡ ನಿಜವಾದ ವೀರನಾಗಿದ್ದರೆ, ಬಾ ಯುದ್ಧಕ್ಕೆ.

**ಅರ್ಜುನ** :— ಧರ್ಮಾಜ್ಞೆಯನ್ನು ಮೀರಿ. ಈ ಪಾರ್ಥನು ಯಾವ ಕಾಲಕ್ಕೂ ಪಾಪಿಯಾಗಿಲ್ಲ ! (ಒಂದು ಬದಿಗೆ) ಎಲ ಎಲಾ ಇಂತಹ ಪ್ರಸಂಗವು ಪ್ರತ್ಯಕ್ಷ ವೈರಿಗೂ ಬರಬಾರದು. ನಡೆಯಿರಿ, ಎಲ್ಲರೂ ನನ್ನ ಅಗ್ನಿ ಪ್ರವೇಶದ ಸಿದ್ಧತೆಯನ್ನು ಮಾಡಿರಿ. (ಹೋಗಹತ್ತುವನು)

**ಜಯ** :— ನಿಲ್ಲು—ಎಲ್ಲಿ ಹೋಗುವೆ ? ನೀನು ನನ್ನನ್ನು ಜೀವದಿಂದ ಬಿಟ್ಟರೂ, ನಾನು ನಿನ್ನನ್ನು ಬಿಡುವದಿಲ್ಲ ?

**ಅರ್ಜುನ** :— ಮೂರ್ಖಾ, ನಾಲಿಗೆಯನ್ನು ತಡೆದು ಮಾತಾಡು. ನನ್ನ ಪ್ರತಿಜ್ಞೆಯು ನನಗೇ ಅಡ್ಡಬರದಿದ್ದರೆ, ನಿನ್ನ ರುಂಡವನ್ನು ಒಂದು ಕ್ಷಣ

ದಲ್ಲಿ ಆಕಾಶಕ್ಕೆ ಹಾರಿಸುತ್ತಿದ್ದೆ—ಆದರೆ ಏನು ಮಾಡಲಿ—

**ದುಯೋ೯ :**— ಜಯದ್ರಥಾ, ಅವನು ಸ್ವಸಂತೋಷದಿಂದ ಅಗ್ನಿ ಪ್ರವೇಶ ಮಾಡಿ, ಸಾಯುವದಕ್ಕೆ ಸಿದ್ಧನಾಗಿರುತ್ತಾನೆ; ಅಂದಮೇಲೆ, ಅವನನ್ನು ಕೊಲ್ಲುವದಕ್ಕೆ ನೀನೇಕೆ ಶ್ರಮತಕ್ಕೊಳ್ಳುವೆ? ಪಾಪ ಹೋಗಲಿ ಬಿಡು. ಸಾಯುವದಕ್ಕೆ.

**ಜಯ :**— ಹಾಗಾದರೆ ಈ ವೀರನು, ಇದೊ ಹೀಗೆ ಗಾಂಭಿರ್ಯದಿಂದ ತನ್ನ ಖಡ್ಗವನ್ನು ವರೆಗಾಣಿಸುವನು.

**ಭೀಮ :**— ನೀನು ವೀರನೇ, ಹಾಗಾದರೆ ಬೆಳಗಿನಿಂದ ಸಾಯಂಕಾಲದವರೆಗೆ, ಭಯಪಟ್ಟು, ಗೂಗೆಯಂತೆ ಎಲ್ಲಿ ಅಡಗಿಕೊಂಡು ಕುಳಿತಿದ್ದೆ ?

**ದುಯೋ೯ :**— ಭೀಮಾ--ಆ ವಿಚಾರ ಮಾಡುತ್ತ ಎಕೆ ಕಾಲಕಳೆಯುವೆ; ಮೊದಲು ಪಾರ್ಥನ ಅಗ್ನಿ ಪ್ರವೇಶದ ಸಿದ್ಧತೆಯನ್ನು ಮಾಡು ! ನಾಳೆ ಉಳಿದ ವಿಚಾರ ಮಾಡಲಿಕ್ಕೆ ಬಂದೀತು ! ಯಾಕೆ, ಧರ್ಮರಾಜರೇ ಅರ್ಜುನನಂತೂ ಅಗ್ನಿ ಪ್ರವೇಶಕ್ಕೆ ಹೊರಟನು; ಇನ್ನು ತಮ್ಮ ಪ್ರತಿಜ್ಞೆಯು ಹೇಗೆ ? ಅದೇ ಕುಂಡದಲ್ಲಿಯೇ ಪೂರ್ಣಮಾಡುವಿರೋ, ಅಥವಾ ಬೇರೆ ಕುಂಡದ ವ್ಯವಸ್ಥೆ ಮಾಡಬೇಕೊ ? ಯಾಕಂದರೆ–ದೊಡ್ಡವರ ಸಾಂಪ್ರದಾಯ, ಕೇಳುವದೇನು ? ಪಂಚ–ಪಾಂಡವರ ಸಲುವಾಗಿ ಬೇರೆ ಬೇರೆ ಕುಂಡಗಳನ್ನೇ ತಾವು ರಚಿಸತಕ್ಕನದು ! ( ಎಲ್ಲರೂ ನಗುವರು )

**ಶ್ರೀಕೃಷ್ಣ :**— (ಸ್ವ) ನಾಟಕವು ಒಳ್ಳೇ ಕಳೆಕಟ್ಟಿರುವದು ! ಈ ಮದೋನ್ಮತ್ತರ ಪಾಪವು ಎಲ್ಲಿಯವರೆಗೆ ಹೋಗುವದೋ ನೋಡೋಣ !

**ಜಯ :**— ಯಾಕೆ-ಕೃಷ್ಣಾ, ಎಲ್ಲಿ ಓಡಿತು---ನಿನ್ನ ಪರಮಾತ್ಮನ ಶಕ್ತಿಯು ! ನೀನು ಭಕ್ತರಕ್ಷಕನಲ್ಲವೇ ? ಪಾಂಡವರ ಪರಮೇಶ್ವರನಲ್ಲವೆ ? ಹಾಗಾದರೆ ಹೀಗೇಕೆ ಸ್ತಬ್ಧನಾಗಿ ನಿಂತಿರುವೆ. ಯಾರಿಗೋಸ್ಕರ ಮಾರ್ಗ ನೀರಿಕ್ಷಣೆಮಾಡುವೆ?

**ಶ್ರೀಕೃಷ್ಣ :**— ನರಾಧಮಾ, ನಾನಾದರೂ ನಿನ್ನ ಮರಣಕಾಲದ ಮಾರ್ಗವನ್ನೇ ನಿರೀಕ್ಷಿಸುತ್ತಿರುವೆನು, ಸ್ವಲ್ಪ ತಾಳು, ಪಾಂಡವರ ಪುಣ್ಯವು ಎಷ್ಟು ಬಲವತ್ತರವಾಗಿರುವದೆಂಬುದು, ನಿನಗೇ ಗೊತ್ತಾಗುವದು.

**ದುಯೋ೯ :**— ಕೃಷ್ಣಾ–ನಿನ್ನ ದೈವೀ ಶಕ್ತಿಯ ಪ್ರಭಾವವನ್ನು ತೋರಿಸುವದಕ್ಕೆ ಇದೇನು ಗೋಪಿಕಾಸ್ತ್ರೀಯರ ಮನೆಯೇ. ಇಲ್ಲಿ ಹಾಲಿಲ್ಲ ! ಕೆನೆಮೊಸರು ಬೆಣ್ಣೆಗಳಿಲ್ಲ ! ನಿನ್ನ ಅವತಾರದ ಪೊಳ್ಳು ಅಹಂಕಾರವನ್ನು, ಈ

ದುರ್ಯೋಧನನ ಮುಂದೆ ತೋರಿಸಬೇಡ !

**ಧರ್ಮ** :— ಪರಮೇಶ್ವರನ ಪ್ರಭಾವವು ನಿನಗೆ ತಿಳಿದಿದ್ದರೆ, ನಿನ್ನಂತಹ ದುಷ್ಟರ ದುರುಳವೃತ್ತಿಯು ಯಾವಾಗಲೋ ನಷ್ಟವಾಗಿ ಹೋಗುತ್ತಿತ್ತು.

**ಜಯ** :— ಪರಮೇಶ್ವರನ ಪ್ರಭಾವವು ನಿಮಗೆ ಗೊತ್ತಿರುವದಲ್ಲವೇ. ಹಾಗಾದರೆ ಈ ಕಪಟೀ ಪರಮೇಶ್ವರನ ಪ್ರಭಾವವು ನಿಮಗೆ ಗೊತ್ತಿದ್ದರೆ, ಇವನ ಮುಂದೆ ನಿಮ್ಮ ಶಂಖಧ್ವನಿಯನ್ನು ಪ್ರಾರಂಭಿಸಿರಿ ! ಅಂದರೆ ಅವನು ಈ ಸಮಯದಲ್ಲಿ ನಿಮ್ಮನ್ನು ಹೇಗೆ ರಕ್ಷಿಸುತ್ತಾನೋ ನೋಡುತ್ತೇನೆ.

**ಶ್ರೀಕೃಷ್ಣ** :— ಹಾಗಾದರೆ ನೋಡು, ನನ್ನ ಮಹಿಮೆಯನ್ನು. ಸುದರ್ಶನಾ, ನಡೆ ಹಿಂದಕ್ಕೆ ತಿರುಗಿ ! ಸೂರ್ಯಮಂಡಲವು ಮೊದಲಿನಂತೆ ಪ್ರಕಾಶಿಸಲಿ !

**ಜಯ** :— ಸೂರ್ಯನು ಮುಳುಗಿರುವಾಗ ನನಗೆ ಇನ್ನಾರ ಭೀತಿ ?

**ಶ್ರೀಕೃಷ್ಣ** :— ಸೂರ್ಯನು ಮುಳುಗಿರುವನೇ ? ಎಲ್ಲಿ ಮುಳುಗಿರುವನು ? ಅದೋ ನೋಡು; ಪ್ರತ್ಯಕ್ಷ ಕಾಲನು ಕೆಂಪಗೆ ಉರಿಗಣ್ಣುಮಾಡಿ, ಕ್ರೋಧದಿಂದ ನಿನ್ನನ್ನೇ ನೋಡುತ್ತಿರುವನು, ( ಸೂರ್ಯಮಂಡಲವು ಪ್ರಕಾಶಮಾನವಾಗುವದು.)

**ಜಯ** :— ಎಲಾ ಇದೇನು ಚಮತ್ಕಾರವು !

**ಶ್ರೀಕೃಷ್ಣ** :— ಅರ್ಜುನಾ, ನೋಡುವಿಯೇನು, ಅಲ್ಲಿ ಸೂರ್ಯ, ಇಲ್ಲಿ ಜಯದ್ರಥಾ, ಬಾಣಹೊಡೆದು, ಈತನ ಶಿರಸ್ಸನ್ನು ಆಕಾಶಕ್ಕೆ ಹಾರಿಸು !

( ಜಯದ್ರಥನ ಮೇಲೆ ಅರ್ಜುನನು ಬಾಣಬಿಡುವನು )

**ದುರ್ಯೋ** :— ಘಾತವು-ಘಾತವು ? ಕೃಷ್ಣ ಕಾರಸ್ಥಾನವು ! (ಓಡಿ ಹೋಗುವನು)

**ಅರ್ಜುನ** :— ದೇವಾ—ಪ್ರತಿಜ್ಞೆಯನ್ನು ಪೂರ್ತಿಗೊಳಿಸಿ ವಿಜಯಶಾಲಿಯಾದ ಪಾರ್ಥನು ತಮಗೆ ಅಭಿನಾದನ ಮಾಡುವನು. (ನಮಸ್ಕರಿಸುವನು)

**ಶ್ರೀಕೃಷ್ಣ** :— ಏಳು—ಏಳು ಅರ್ಜುನಾ ಇದೇನು.

**ಧರ್ಮ** :— ಶ್ರೀಕೃಷ್ಣಾ-ಇವೆಲ್ಲ ಚಮತ್ಕಾರವು ಹೇಗೆ ಕೂಡಿಬಂತು?

**ಶ್ರೀಕೃಷ್ಣ** :— ಆ ರಹಸ್ಯವು ತಿಳಿದಮೇಲೆ, ಅದರಲ್ಲಿ ಅಷ್ಟು ಚಮತ್ಕಾರ ಉಳಿಯುವದಿಲ್ಲ. ಪಾಂಡವರ ಏಕನಿಷ್ಠ ಭಕ್ತಿಗೆ ಮೆಚ್ಚಿ, ಶ್ರೀಕೃಷ್ಣನು ಬೇಕಾದ್ದನ್ನು ಮಾಡುವನು. ನಿಮ್ಮ ಯಶವೇ ನನ್ನದು !

**ಅರ್ಜುನ** :— ಪ್ರತಿಜ್ಞೆಯು ಪೂರ್ಣವಾಯಿತು. ಜಯದ್ರಥನ ಸಂಹಾರ ಮಾಡಿ, ಅಭಿಮನ್ಯುವಿನ ವಧೆಯ ಸೇಡು ತಕ್ಕೊಂಡೆನು! ಆನಂದವೇ ಆನಂದವಾಯಿತು. ಆದರೆ ಈ ಕೇಸರಿಯ ಪುತ್ರನು, ಹೋದವನು ಹೋಗಿಯೇ ಹೋದನು.

**ಶ್ರೀಕೃಷ್ಣ** :— ಈ ಕೇಸರಿಯ ಪುತ್ರನು, ಹೋಗಲಿಲ್ಲ; ನಿನ್ನ ಅಭಿಮನ್ಯುವು ಮೃತನಾಗಲಿಲ್ಲಿ. ಈ ಸೂರ್ಯಸ್ವರೂಪದಲ್ಲಿ ಯಾವತ್ತೂ ರಾಷ್ಟ್ರಭಕ್ತರಿಗೆ ತೇಜಸ್ವಿಯಾದ ರಾಷ್ಟ್ರಸೇವೆಯ ಪವಿತ್ರವೃತ್ತಿಯ ಸಂದೇಶವನ್ನು ಉಪದೇಶಿಸುವದಕ್ಕೋಸ್ಕರ ಸ್ವರ್ಗ ದೇವತೆಯ ಉದರದಲ್ಲಿ ದಿನಾಲು ಜನ್ಮಿಸುತ್ತಿರುವನು! ಧನ್ಯ ಧನ್ಯನು, ಆ ಬಾಲನು ನಿಜವಾಗಿಯೂ ಧನ್ಯನು!

ಸುಭದ್ರಾ, ಉತ್ತರಾ, ಮೊದಲಾದವರು ಬರುವರು

**ಸುಭದ್ರಾ** :— ಅಭಿಮನ್ಯುವೇ-ಅಭಿಮನ್ಯುನೇ, ಎಲ್ಲಿ ನನ್ನ ಕುಮಾರನು!

**ಉತ್ತರಾ** :— ನಾಥಾ-ನಾಥಾ ತಮ್ಮ ಮನೋಹರ ಮೂರ್ತಿಯು ಎಲ್ಲಿರುವದು ?

**ಎಲ್ಲರೂ** :— ಆ ಕೇಸರಿ ಪುತ್ರನು, ನಮ್ಮೆಲ್ಲರ ಪಂಚಪ್ರಾಣವು !

**ಶ್ರೀಕೃಷ್ಣ** :— ಅದೋ ನೋಡಿರಿ, ಸ್ವರ್ಗದ ಸಿಂಹಾಸನ ಮೇಲೆ ಆನಂದಿಂದ ವಿರಾಜಮಾನನಾಗಿದ್ದಾರೆ. (ಟ್ರಾನ್ಸಫರ ಸೀನ) ಸ್ವದೇಶಕ್ಕೋಸ್ಕರ ಸ್ವಜನರ ಉದ್ಧಾರದ ಸಲುವಾಗಿ ತನ್ನ ಪ್ರಾಣವನ್ನೇ ಅರ್ಪಿಸಿದಂತಹ ವೀರನು ಇವನೇ ಅವನು. ವೀರನಾದ ಭರತಪುತ್ರನು ! ಪಾರ್ಥ-ಮೈತ್ರೇನಾದರೂ ನಿನ್ನ ಅಪೇಕ್ಷೆ ಇದ್ದರೆ ಕೇಳು.

**ಅರ್ಜುನ** :— ದೇವಾ—ನಿನ್ನ ಅಗಾಧಲೀಲೆಯ ಮಹಿಮಾತಿಶಯವು ಯಾರಿಗೂ ತಿಳಿಯದು ! ನಿನ್ನ ಪಾದ ಸನ್ನಿಧಿಯಲ್ಲಿ ನಾವು ಇಷ್ಟೇ ಬೇಡುವೆವು.

## ಮಂಗಳ

**ಎಲ್ಲರೂ** :—

ಶ್ರೀವಾಸುಕಿಶಯನಾ । ಭವಜಲಧಿ ಸಂಹರಣಾ ಕವಿಕುಲವ ।
ಸನ್ಮಾನದಿಂದಲಿ ಕಾಯ್ವಾ । ಮತ್ಸ್ಯೇತ್ಯಾದಿ ರೂಪಸಮಾನಮತ ॥ ಪ ॥
ಶ್ರೀರಘುಕುಲತಿಲಕ ರಾಮಾ । ನರ ಮಧುರ ತವ ನಾಮಾ ।
ವಾರಿಜಸಂಭೂತಾ ಸುರಾದಿ ವಂದಿತು ವಾಮನಾ ॥ ೧ ॥

ಸಮಾಪ್ತ



## ವೈ. ವಾ. ವಾಮನರಾವ ಮಾಸ್ತರ ಕೃತ

### ನಮ್ಮಲ್ಲಿ ದೊರೆಯುವ ಪುಸ್ತಕಗಳು.

| | | |
|---|---|---|
| ೧. | ವೀರ ಅಭಿಮನ್ಯು | ೧-೮-೦ |
| ೨. | ಪಾರ್ವತೀ ಸತ್ವಪರೀಕ್ಷಾ | ೧-೮-೦ |
| ೩. | ಸಂದೇಹ ಸಾಮ್ರಾಜ್ಯ | ೧-೮-೦ |
| ೪. | ದ್ರೌಪತೀ ವಸ್ತ್ರಾಹರಣ | ೧-೮-೦ |
| ೫. | ಕೃಷ್ಣಾರ್ಜುನರ ಯುದ್ಧ | ೧-೮-೦ |
| ೬. | ಸಾಧ್ವೀ ಸಖೂಬಾಯಿ | ೧-೮-೦ |
| ೭. | ಎರಡನೆ ಬಾಜೀರಾವ ಪೇಶವೆ | ೧-೮-೦ |
| ೮. | ಭಕ್ತಪ್ರಲ್ಹಾದ-- | ೧-೮-೦ |

ಪುಸ್ತಕ ಮಾರಾಟಗಾರರಿಗೆ ಧಾರಾಳವಾಗಿ ಕಮೀಶನ್ ಕೊಡಲಾಗುವದು.

**ಪುಸ್ತಕಗಳು ದೊರೆಯುವ ಸ್ಥಳ:**

**ವೆಂ. ವಾ. ಸವಣೂರ**

ಮೆಣಸಿನಕಾಯಿಗಲ್ಲಿ
ಧಾರವಾಡ.

## ಪುಸ್ತಕ ದೊರೆಯುವ ಸ್ಥಳ

ಮನೋಹರ ಗ್ರಂಥ ಭಾಂಡಾರ, ಧಾರವಾಡ
ಸಾಹಿತ್ಯ ಮಂದಿರ, ಧಾರವಾಡ
ರಾಮಾಶ್ರಯ ಬುಕ್ಕ ಡಿಪೋ, ಧಾರವಾಡ
ವಾಗ್ವಿಲಾಸ ಪುಸ್ತಕಾಲಯ, ಹುಬ್ಬಳ್ಳಿ
ಸಾಹಿತ್ಯ ಭಾಂಡಾರ, ಹುಬ್ಬಳ್ಳಿ
ಟಿ. ಬಿ. ಕಾತೀಕಾಪಡೆ ಬುಕ್‌ಸೇಲರ್ಸ್, ಗುಲಬುರ್ಗಾ
ಪಿ. ಸಿ. ಶಾಬಾದಿಮಠ ಬುಕ್‌ಸೇಲರ್ಸ್, ಗದಗ
ಚನ್ನಪ್ಪಾ ಬುಕ್ ಸೇಲರ್ಸ್ ಬಾಗಲಕೋಟೆ